ಪ್ರಬೋಧ ಪುಸ್ತಕ ಮಾಲೆಯ ೧೯ನೆಯ ಹೂ.

# ಹೊನ್ನುಹಕ್ಕಿ

(ಕವನ ಸಂಗ್ರಹ)

ಕರ್ತರು :

**ಸೂರ್ಯ ಸಿಂಹಾಸನಾಧೀಶ್ವರ**

**ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯರು,**

ಶ್ರೀ ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ, ಗೂಳೂರು.

ಸಂಗ್ರಾಹಕ :

**ಎ. ಎಂ. ಪ್ರಭುದೇವ,**

ಅಡ್ನೂರು.

ಶ್ರೀ ಜಗದ್ಗುರು [illegible] ಪ್ರೆಸ್ [illegible]

ನಂ. ೪೯, ಹೆಚ್ ಬಿ. ಸಮಾಜ ರೋಡು

**ಬೆಂಗಳೂರು ೪.**

ಪ್ರಕಾಶಕರು :

**ಪ್ರಬೋಧ ಪುಸ್ತಕಮಾಲೆ**

ನಂ. ೬, ೩ನೇ ರಸ್ತೆ, ಚಾಮರಾಜಪೇಟೆ,

ಬೆಂಗಳೂರು ೨.

ಆಶ್ರಯದಾತರು :

**ಶ್ರೀಮಾನ್ ಕೆ. ಜಿ. ಬಸಪ್ಪನವರು,**

ಕದಿರೇನಹಳ್ಳಿ, (ವಿದುರಾಶ್ವತ್ಥ)

ಗೌರಿಬಿದನೂರು ತಾಲೂಕು.



**ಬೆಲೆ : ರೂ. ೧-೪-೦**

೧೯೫೨

ಮುದ್ರಕರು :

ಪ್ರಬೋಧ ಮುದ್ರಣಾಲಯ,

ಚಾಮರಾಜಪೇಟೆ, ಬೆಂಗಳೂರು ಸಿಟಿ.

# ಅರಿಕೆ

ಸನ್ನಿಧಿಯವರ ಭಾವಪೂರ್ಣ ಕವನಗಳು ಒಂದು ವರುಷದ ಹಿಂದೆಯೆ ನನ್ನ ಮನಸ್ಸನ್ನಾಕರ್ಷಿಸಿದವು. ಅವುಗಳಲ್ಲಿ ಮನಮುಟ್ಟುವ ಆನಂದವನ್ನು ಹುಟ್ಟಿಸುವ ದಿವ್ಯಶಕ್ತಿಯಿದೆ. ಓದುವ ಅಭಿಲಾಷೆಯನ್ನು ಹುಟ್ಟಿಸುವ ರುಚಿಯಿದೆ. ಆದುದರಿಂದ ಅಂದಿನಿಂದ ಸನ್ನಿಧಿಯ ಕವನ ಗಳನ್ನೆಲ್ಲ ಕಲೆಹಾಕುವ ಮನಸ್ಸಾಯಿತು. ಕೆಲಸವನ್ನು ಮುಂದುವರಿಸಿ ಮುಗಿಸಿಯೂ ಆಯಿತು.

ನಾಲ್ವತ್ತು ಮೂರು ಕವನಗಳಲ್ಲಿ ಕೆಲವು ಹಳೆಯವು. ಕೆಲವು ಹೊಸವು. ಇವುಗಳಲ್ಲಿ ಕೆಲವು ಭಕ್ತಿಗೀತೆಗಳೂ ಇವೆ. 'ಪ್ರಮಥರಪೂಜೆ' 'ಗುರುವೆ' 'ಏನು ಮಾಡಿದರೇನು' ಇತ್ಯಾದಿ ಗೀತೆಗಳನ್ನು ಬೆಂಗಳೂರಿನಲ್ಲಿ ಕೆಲವು ಮಂದಿ ಭಕ್ತರು ಶಿವಪೂಜಾದಿ ಸಮಯದಲ್ಲಿ ಕೈವಲ್ಯಗಳ ಹಾಡುಗ ಳಂತೆ ಭಕ್ತಿಪರವಶರಾಗಿ ಹಾಡಿಕೊಳ್ಳುವ ರೂಢಿಯುಂಟು. ಹಾಡುವವರ ಮುಖಾಂತರ ಅಂಥವುಗಳನ್ನು ಸಂಗ್ರಹಿಸಲಾಯಿತು. ಪತ್ರಿಕೆಗಳಿಂದ ಕೆಲವನ್ನು ಕಲೆಹಾಕಲಾಯಿತು. ಇನ್ನು ಕೆಲವನ್ನು ಕೋರಿಕೆಗೆ ಕೃಪೆಮಾಡಿ ಸನ್ನಿಧಿಯವರು ಹೊಸದಾಗಿ ಬರೆದುಕೊಟ್ಟರು. ಹೀಗೆ ಕವನಗಳ ಸಂಗ್ರಹ ವೇನೊ ಆಯಿತು. ಆದರೆ ಬೆಳಕಿಗೆ ಬರುವ ಬಗೆ ಹೇಗೆ ಎನ್ನುವಷ್ಟರಲ್ಲಿ ಕದಿರೇನಹಳ್ಳಿ (ವಿದುರಾಶ್ವತ್ಥ) ಶ್ರೀ ಕೆ. ಜಿ. ಬಸಪ್ಪನವರು ಮುಂದೆ ಬಂದು ಉದಾರ ಮನಸ್ಸಿನಿಂದ ತಾವು ಮತ್ತು ತಮ್ಮ ಬಂಧುವರ್ಗದವರು ಶ್ರೀ ಸಂಸ್ಥಾನದಲ್ಲಿ ತಾ|| ೧೮-೮-೫೨ ರಲ್ಲಿ ಸನ್ನಿಧಿಯಿಂದ ಶಿವದೀಕ್ಷೆಯನ್ನು ಪಡೆದರು. ಅದರ ಚಿರಸ್ಮಾರಕವಾಗಿ ಪ್ರಕಟಿಸುವ ಮನಸ್ಸುಮಾಡಿದುದರ ಫಲವಾಗಿ ಇದು ಬೆಳಕಿಗೆ ಬರುವಂತಾಯಿತು. ಇದರಿಂದ ನನ್ನ ಶ್ರಮ, ಸೇವೆಗಳು ಸಾರ್ಥಕವಾದವು.

ನನ್ನ ಪ್ರಾರ್ಥನೆಯನ್ನು ಮನ್ನಿಸಿ ಮುನ್ನುಡಿಯನ್ನು ಬರೆದುಕೊಟ್ಟ ಶ್ರೀಮಾನ್ ಓ. ಎನ್. ಲಿಂಗಣ್ಣಯ್ಯನವರು (ಬಿ. ಎ.) ಅಮಲ್ದಾರ್ ಚಿಕ್ಕನಾಯಕನಹಳ್ಳಿ ಅವರಿಗೆ ತುಂಬಾ ಕೃತಜ್ಞನಾಗಿದ್ದೇನೆ. ಅವರ ಮುನ್ನುಡಿ 'ಹೊನ್ನು ಹಕ್ಕಿ' ಹಾರಲು ಹಾದಿ ಹಾಕಿದೆ.

ಬೆಂಗಳೂರು,
೧೫-೮-೧೯೫೨

**ಎ. ಎಂ. ಪ್ರಭುದೇವ.**

# ಮುನ್ನುಡಿ

ಶ್ರೀ ಜಗದ್ಗುರು ನಿಡುಮಾಮಿಡಿ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಪೂಜ್ಯ ಚನ್ನಬಸವರಾಜ ದೇಶೀಕೇಂದ್ರ ಶಿವಾಚಾರ್ಯರು- ಹೊನ್ನುಹಕ್ಕಿ- ಎಂಬ ಕವನಗಳನ್ನು ರಚಿಸಿರುತ್ತಾರೆ. ಶ್ರೀ॥ ಎ. ಎಂ. ಪ್ರಭುದೇವರು ಅಡ್ನೂರು ಅವರು ಈ ಕವನಗಳನ್ನು ಸಂಗ್ರಹಿಸಿರುತ್ತಾರೆ. ಬೆಂಗಳೂರು ಪ್ರಬೋಧ ಪುಸ್ತಕಮಾಲೆಯಲ್ಲಿ ಈ ಕವನಸಂಗ್ರಹ ಅರಳಿದೆ. ಶ್ರೀ॥ ಕೆ. ಜಿ. ಬಸಪ್ಪನವರು ಈ ಗ್ರಂಥಪ್ರಕಾಶನಕ್ಕೆ ಆಶ್ರಯದಾತರೆನಿಸಿದ್ದಾರೆ. ಈ ಹೊನ್ನುಹಕ್ಕಿ- ಕವನಗಳ ಪರಿಚಯವನ್ನು ಮಾಡಿಕೊಡುವ ಭಾಗ್ಯ ನನಗೆ ಲಭಿಸಿರುವುದು ತುಂಬ ಸಂತೋಷದ ಸಂಗತಿ. **ಕವಿ-ಗುರು** ಸೃಷ್ಟಿಸಿದ ಕಲ್ಪನಾಪಕ್ಷಿ- ಈ ಹೊನ್ನುಹಕ್ಕಿ! ಇದು ವೇದಾಂತ ಹೃದಯ; ಸಾಹಿತ್ಯ ವಾಣಿ!

**ಕನಕಪಕ್ಷಿ**
**ಕಣ್ಣಮುಂದೆ ಹಾರಿ ಹೋಯ್ತು**
**ಮನವೆ ಸಾಕ್ಷಿ**
**ಬಣ್ಣವೊಂದು ತಿಳಿಯದಾಯ್ತು!**

ಇದು ಕವಿ ಭಾವಸಮಾಧಿಯಲ್ಲಿ ಕಂಡ ಸುಂದರದೃಶ್ಯ! ಪ್ರತಿಭೆ ಮಿಂಚುತ್ತಿದೆ; ಕಲ್ಪನಾ ದಿಗಂತ ಸೀಮಾತೀತವಾಗಿದೆ. ನಾವು ಆಕಾಶದಲ್ಲಿ ಹಾರಾಡುವ ಹಕ್ಕಿಗಳನ್ನು ನೋಡಿದ್ದೇವೆ. ಇಂಚರವನ್ನು ಕೇಳಿದ್ದೇವೆ. ಹೊನ್ನುಹಕ್ಕಿ ಎಲ್ಲ ಹಕ್ಕಿಗಳಂತಲ್ಲ. ಈ ಹಕ್ಕಿಯನ್ನು ನೋಡುವ ಕಣ್ಣು; ತಿಳಿಯುವ ಮನಸ್ಸು; ಅರಿಯುವ ಬುದ್ಧಿ ನಿರ್ಮಲವಾಗಿರಬೇಕು. ಆಗ ಹೊನ್ನುಹಕ್ಕಿಯ ಪರಿಚಯವಾದೀತು! ಅಲ್ಲಿ ನೋಡಿ; ನೀಲಗಗನದಲ್ಲಿ ಹೊನ್ನುಹಕ್ಕಿ ಹಾರುತ್ತಿದೆ! ಅದರ ಇಂಚರವನ್ನು ಆಲಿಸಿರಿ; ಅದರ ದೃಷ್ಟಿ ವಿಶ್ವದೃಷ್ಟಿ; ಅದರ ಗಾನ ಪ್ರೇಮಗಾನ! ಆ ಹಕ್ಕಿಯ ದಾರಿಯನ್ನು ಗಮನಿಸಿದಿರಾ! ಅದು ವನರಾಜಿಯನ್ನು ದಾಟಿ; ಗಿರಿಪಙ್ಕ್ತಿಯನ್ನು ಮೆಟ್ಟಿ;

ಮುಗಿಲ ಮಾಲೆಯನ್ನು ಹಾಯ್ದು* "ಸಂಜೆಯಸೂರ್ಯ" ನ ಹೊಂಬೆಳ ಕನ್ನು ಕಂಡು ಮಹಾಶೂನ್ಯದತ್ತ ಸಾಗುತ್ತಿದೆ. ಬಲ್ಲವರಾರು ಆ ಹಕ್ಕಿಯ "ಪೂರ್ವೋತ್ತರ"! ಅದನ್ನು ಅರಿಯಲು "ರಾಗಿಯ ಬೀಸೋಣ". "ಏನು ಮಾಡಿದರೇನು?" ಆ ಹೊನ್ನು ಹಕ್ಕಿಯ ಜೀವನ ತತ್ವವನ್ನು ಅರಿಯಬೇಕಾದರೆ "ನುಡಿಗೆ ನಡೆಯನು" "ತುಂಬಿ ನೋಡು"! "ತಂಗಾಳಿ" ಬೀಸುತ್ತಿದೆ. "ಕೊಳಲುಗಾನ" ನುಡಿಯುತ್ತಿದೆ. ಆ ಹೊನ್ನು ಹಕ್ಕಿ "ನಿಡುಮಾಮಿಡಿಯ ನೋಡಿ" ಅಲ್ಲಿಯ "ತೆಂಗಿನಮರ" ದಲ್ಲಿ ಕುಳಿತು "ಗುರು ಗೀತೆ" ಯನ್ನು ಹಾಡಿ, ವಾಯುಪಥದಲ್ಲಿ ಹಾರುತ್ತಿದೆ. ದಾರಿಯಲ್ಲಿ "ಶಿವಯೋಗ ಮಂದಿರ" ವನ್ನು ಸಂದರ್ಶಿಸಿ, ಅಲ್ಲಿ "ಪ್ರಮಥರ ಪೂಜೆ" ಯನ್ನು ಕಂಡು ಆ ಹಕ್ಕಿ "ಕುಮಾರ ಚಂದ್ರ" ನ ಉದಯಕಾಲವಲ್ಲಿ ಆ ಪುಣ್ಯಾರಣ್ಯದಲ್ಲಿ ಸುಳಿದಾಡುತ್ತಿದೆ.

ತಿಳಿ ತಿಳಿ ಹರಿಯುವ ಮಲಾಪಹಾರಿಣಿ
ನದಿಯಾ ನಿಲುವಿನ ಸೊಂಪೇನು?
ಸುಳಿ ಸುಳಿ ಹಬ್ಬಿದ ಬಳ್ಳಿಯ ಮಂಟಪ
ಬುಡದಲಿ ನೆರಳಿನ ತಂಪೇನು?

"ಕುಮಾರ ಯೋಗಿ" ಸಂಸ್ಥಾಪಿಸಿದ ಆ ಶಿವಯೋಗ ಮಂದಿರದಲ್ಲಿ "ವಟು ಜೀವನ" ರೀತಿಯನ್ನು ಅರಿತು "ಶರಣೆಯರ ಸ್ಮರಣೆ" ಮಾಡಿ "ಮಾದೇವಿಗೆ" ವಂದಿಸಿ "ಬಸವರಾಜಗೆ" ಮಣಿದು "ನಲುಗನ್ನಡ" ನುಡಿಯಲ್ಲಿ "ಬಸವೇಶ್ವರ ವಚನ" ವನ್ನು ಹಾಡಿ "ಅಕ್ಕನ ಹಾಡು" ಹೇಳಿ "ಹರಿಹರ" ಮಹಾಕವಿ ಮತ್ತು "ಭಕ್ತಿ ಭಾಂಡಾರಿ ಬಸವಣ್ಣ" ನವರನ್ನು ನೆನೆದು ಆ ಹಕ್ಕಿ ಮೇಲೇರಿ ಹಾರುತ್ತಿದೆ. "ಸ್ವಾಮಿ-ಸಾಹಿತಿ" ವೇದಾಂತಿ, ಆಸ್ತಿಕ, ನಾಸ್ತಿಕರಿಗೆ "ಅಳಿ-ಯ" ದ ಆಸಕ್ತಿಯಿಂದ ತೆರೆಬಾಗಿಲು "ತೆರೆಬಾಗಿಲು" ಎಂದು ಉಲಿಯುತ್ತಾ "ತಂದೆ-ಬಂದೆ" ಎಂದು "ಅರಸು" ತ್ತ "ವಿಶ್ವಾತ್ಮಾ-ಪರಮಾತ್ಮಾ" "ಬೆಳಗಿಬಾ" "ಕರುಣದಿಂದ" ಮೈದೋರಿಬಾ! "ಗುರುವೆ" ಎಂಬ "ಅಮರವಾಣಿ" ಯನ್ನು ದಿಗಂತದಲ್ಲಿ ಮೊಳಗಿಸುತ್ತಾ "ಬಸವ ಕ್ರಾಂತಿ" ಸಂದೇಶವನ್ನು ಸಾರುತ್ತಾ "ಏಳಿರಿ" ಏಳಿರಿ "ಆತಮುಕ್ತ"!

* ಆವರಣ ಚಿಹ್ನೆಗಳಲ್ಲಿ ಸೂಚಿಸಿರುವ ಹೆಸರಿನ ಕವನಗಳು ಈ ಗ್ರಂಥದಲ್ಲಿವೆ.

ನಾವು "ಜಯಗೀತ" ವನ್ನು ಹಾಡೋಣ! – ಎಂದು ನುಡಿಯುತ್ತಾ, ಶಿವ–ಜೀವೈಕ್ಯರಹಸವನ್ನು ಹಾಡಿ ಹಾಡಿ ಆ ಕನಕಪಕ್ಷಿ–ಜೀವಾತ್ಮಪಕ್ಷಿ ಶೂನ್ಯದಲ್ಲಿ – ಮಹಾಲಿಂಗದಲ್ಲಿ ಐಕ್ಯಾನುಸಂಧಾನ ಪಡೆಯುತ್ತಿದೆ. "ಇದಕಾಗಿ ಇರಲಿ" ಈ ಹಕ್ಕಿಯು ದಾರಿ ನಮಗೆ! –"ಹಕ್ಕಿ ಇಲ್ಲ, ದಿಕ್ಕು ಇಲ್ಲ, ತಾರೆ ಇಲ್ಲ, ನೀರೆ ಇಲ್ಲ, ಪೆರೆಯು ಇಲ್ಲ, ನಾನು ಇಲ್ಲ, ನೀನು ಇಲ್ಲ – ಎಂಬ ಜೀವ-ಪರಮೈಕ್ಯ **ತತ್ವ**ಸಂದೇಶವನ್ನು ಸಾರುತ್ತಿದೆ! ಮಹಾನಂತದಲ್ಲಿ ಜೀವನ್ಮುಕ್ತಿಯನ್ನು ಪಡೆಯುತ್ತಿದೆ. "ಅಂದು ಬಾಳು ಒಂದು ಹೋಳು" ಎಂದು ಭಾಸವಾಗುತ್ತದೆ! ಶಿವನ ಡಮರುಗ ನುಡಿಯುತ್ತಿದೆ! ಮಹಾಕಾಲ ಮೂರ್ತಿ ನುಡಿಸುವ ಡಮರುಗ ನಾದ ಮಹಾ ಶೂನ್ಯದಲ್ಲಿ ಮೊಳಗುತ್ತಿದೆ! "ಬುಡುಬುಡಿಕೆಯ ಹಾಡು ಕೇಳಿಬರುತ್ತಿದೆ. ಪ್ರಕೃತಿ ಜೀವ–ಶಿಶುವಿಗೆ ಜೋಗುಳ ಹಾಡಿ ಹರಸುತ್ತಾಳೆ. ಇದು ಸೃಷ್ಟಿನಿಯಮ.

ಹೊನ್ನುಗಾವಿಯ ಉಡುಗೆಯನ್ನು ಧರಿಸಿರುವ **ಕವಿ–ಗುರು ಶ್ರೀ ಚನ್ನ** ಬಸವ ದೇಶೀಕೇಂದ್ರರು ಲೀಲಾವಿನೋದದಿಂದ ಈ ಹೊನ್ನುಹಕ್ಕಿಯನ್ನು ಲೋಕಕ್ಕೆ ಕಾಣಿಸಿದ್ದಾರೆ. ಆ ಹಕ್ಕಿಯ ಮೈ ಹೊಂಬಣ್ಣ; ವೈರಾಗ್ಯ ಸಂಕೇತ! ಕಣ್ಣುಗಳು ಭಕ್ತಿಜ್ಞಾನದ್ಯೋತಕಗಳು; ರೆಕ್ಕೆಗಳು ಯೋಗ ಭೋಗಗಳು; ಕೊಕ್ಕು ಪರಮಾರ್ಥದರ್ಶಿ! ಕಾಲುಗಳು ಶಿವ–ಜೀವರು! ಒಡಲು ಶಿವಾನುಭವ ಸ್ವರೂಪ! ವಾಣಿ "ಅಮರವಾಣಿ". – ಇದು ಸೋಜಿಗದ ಹಕ್ಕಿ! ಬಿಟ್ಟರೆ ಸಿಕ್ಕದ ಹಕ್ಕಿ! ಸಿಕ್ಕಿದರೆ ಬಿಡದ ಹಕ್ಕಿ! ಕವಿ–ಯೋಗಿಯ ಅನನ್ಯ ಸದೃಶ ಸೃಷ್ಟಿ! ವೇದಾಂತವನ್ನು ಸಾಹಿತ್ಯ ಸುಧೆಯಾಗಿ ಹರಿಯಿಸಿದ್ದಾರೆ; ಹಾಡಿಸಿದ್ದಾರೆ. ಪ್ರತಿಯೊಂದು ಕವನದಲ್ಲಿಯೂ ಕಾವ್ಯ ಪ್ರತಿಭೆಯಿದೆ. ಸಾಹಿತ್ಯಮಾಧುರ್ಯ; ತತ್ವಜಿಜ್ಞಾಸೆ; ಆನಂದಾನುಭವ ಹದವರಿತು ಬೆರೆತು ಬಂದಿವೆ. **ಕವಿ–ಗುರು** ಕಾವ್ಯ ಯೋಗಿಯಾಗಿ ಸಾಹಿತ್ಯ ಗದ್ದುಗೆಯಲ್ಲಿ ಮಂಡಿಸಿ ಲೋಕಾರಾಧನಾ ತಪಸ್ಸನ್ನು ಮಾಡುತ್ತ ಕನ್ನಡ ಕುಲಕೋಟಿಯನ್ನು ಹರಸುತ್ತಿದ್ದಾರೆ. ಹೊನ್ನು ಹಕ್ಕಿ ಕವಿಯ ಕೀರ್ತಿ ಪತಾಕೆಯಂತೆ ಮೆರೆಯಲಿ! ಭಾವನಾ ವಿಹಂಗಮವಾಗಿ ವಿಹರಿಸಲಿ!

ತಾ. 18-11-1952
ಚಿಕ್ಕನಾಯಕನಹಳ್ಳಿ.

**ಓ. ಎಲ್. ಲಿಂಗಣ್ಣಯ್ಯ.**



ಜಗದ್ಗುರು ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರರು
ನಿಡುಮಾಮಿಡಿ ಸಂಸ್ಥಾನ.

# ಆಶ್ರಯದಾತರ



ಶ್ರೀ ಕೆ. ಜಿ. ಬಸಪ್ಪನವರ ತಾಯಿಯವರಾದ
**ಶ್ರೀ ನಂಜಮ್ಮನವರು.**



**ಶ್ರೀ ಕೆ. ಜಿ. ಬಸಪ್ಪನವರು.**
(ಕದಿರೇನಹಳ್ಳಿ ಪಟೇಲರು)
ವಿದುರಾಶ್ವತ್ಥ ಕ್ಷೇತ್ರದ ಕನ್ಸಿನಿಯರ್

# ಪರಿಚಯ

ಮೈಸೂರು ರಾಜ್ಯದ ತೀರ್ಥಕ್ಷೇತ್ರಗಳಲ್ಲಿ ವಿದುರಾಶ್ವತ್ಥವೂ ( ಕದಿರೇನ ಹಳ್ಳಿ ) ಒಂದು. ಇದು ಐತಿಹಾಸಿಕ ಸ್ಥಳ. ಇದಕ್ಕೆ ಪೌರಾಣಿಕ ಚರಿತ್ರೆಯಿದೆ. ಇಂದಿಗೂ ಇದರ ಮಹಿಮೆ ನಡೆಯುತ್ತಿದೆ. ಬೇಕಾದಷ್ಟು ಜನ ಭಕ್ತರು ಬಂದುಹೋಗುತ್ತಿರುತ್ತಾರೆ. ಪಕ್ಕದಲ್ಲಿಯೆ ಉತ್ತರಪಿನಾಕಿನಿ ನದಿಯು ತಿಳಿಯಾಗಿ ಹರಿಯುತಿದೆ. ಕೋಲಾರ ಜಿಲ್ಲಾ, ಗೋರಿಬಿದನೂರು ತಾಲೂಕಿನಲ್ಲಿ ಈ ಕ್ಷೇತ್ರವಿರುತ್ತದೆ.

ಈ ಕದಿರೇನಹಳ್ಳಿ ( ವಿದುರಾಶ್ವತ್ಥ ) ಯ ಗ್ರಾಮಾಧಿಕಾರಿಗಳು ಶ್ರೀ ಪಾಪಯ್ಯನವರು. ಇವರು ಶಿವಾಧೀನರಾಗಿದ್ದಾರೆ. ಇವರ ಧರ್ಮಪತ್ನಿ ಶ್ರೀ ನಂಜಮ್ಮನವರು. ಇವರು ಗುಣದಲ್ಲಿ ಸುಶೀಲರು. ಗೃಹಕೃತ್ಯದಲ್ಲಿ ಸಮರ್ಥರು. ಗುರುಭಕ್ತಿ ಸಂಪನ್ನರು.

ಈ ದಂಪತಿಗಳು ಗ್ರಾಮಾಧಿಕಾರಿಗಳಲ್ಲದೆ ಜಮೀನುದಾರರಾಗಿದಾರೆ. ತುಂಬಾ ಗೌರವದಿಂದ ಬಾಳಿದ್ದಾರೆ. ಧನವಂತರಾಗಿ ಬದುಕಿದಾರೆ. ಇವರಿಗೆ ನಾಲ್ವರು ಗಂಡಸು ಮಕ್ಕಳಿದಾರೆ. ಶ್ರೀ ಕೆ. ಬಸಪ್ಪನವರು, ಶ್ರೀ ಸಕ್ಕರಪ್ಪನವರು, ಶ್ರೀ ಅಶ್ವತ್ಥಪ್ಪನವರು, ಶ್ರೀ ಗಂಗಾಧರಪ್ಪನವರು ಎಂಬುದಾಗಿ ಹೆಸರುಗಳು. ಇವರಲ್ಲಿ ಮೊದಲನೆಯವರೇ ಶ್ರೀ ಕೆ.ಜಿ. ಬಸಪ್ಪನವರು. ಇವರು ವಿದುರಾಶ್ವತ್ಥದ ಕನ್ವೀನಿಯರ್ ( ಧರ್ಮದರ್ಶಿ ) ಆಗಿ ತಾಲೂಕು ಕ್ಷಾಮ ನಿವಾರಣಾ ಕಮಿಟಿ ಮೆಂಬರರಾಗಿ, ವಿದುರಾಶ್ವತ್ಥ ಕೋ-ಅಪರೇಟಿವ್ಹ ಸೊಸೈಟಿ ಸೆಕ್ರೆಟರಿಯಾಗಿ, ತಾಲೂಕು ಮಲ್ಟಿಪರ್ಪಸ್ ಕೋ-ಆಪರೇಟಿವ್ಹ ಸೊಸೈಟಿ ಡಾಯರೆಕ್ಟರಾಗಿ, ಅಗ್ರಿಕಲ್ಚರ್ ಲೈಫ್ ಮೆಂಬರರಾಗಿ ಕೆಲಸ ಮಾಡುತ್ತಿದ್ದಾರೆ. ಎರಡನೆಯವರು ಬಿ.ಎಸ್.ಸಿ. ಬಿ.ಇ. ವರೆವಿಗೂ ಓದಿದಾರೆ. ಮೂರನೆಯವರು ಸೀನಿಯರ್ ಇಂಟರ್‌ಮಿಡಿಯಟ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದಾರೆ. ಮುಂದೆ ಓದುವವರಾಗಿದಾರೆ.

ಈ ಮನೆತನದವರು ಮೊದಲಿನಿಂದಲು ಶ್ರೀ ಜಗದ್ಗುರು ನಿಡುಮಾಮಿಡಿ ಶ್ರೀಶೈಲ ಸಂಸ್ಥಾನದ ಶಿಷ್ಯರು. ಸಂಸ್ಥಾನದ ವಿಷಯದಲ್ಲಿ ಇವರುಗಳಿಗೆ ತುಂಬಾ ಆದರ-ವಿಶ್ವಾಸಗಳಿವೆ. ಇದರ ಫಲವಾಗಿ ತಾ|| ೧೮-೮-೧೯೩೭ರಲ್ಲಿ ಸಂಸ್ಥಾನದಲ್ಲಿ ಸನ್ನಿಧಿಯವರಿಂದ ಶಿವದೀಕ್ಷೆಯನ್ನು ಮನೆಮಂಡಳಿಯವರು

ಮತ್ತು ಸುತ್ತುಮುತ್ತುಗ್ರಾಮದ ಬಂಧುಬಳಗದವರು ಸೇರಿ ನೂರಾನಾಲ್ವತ್ತು ಜನರು ಪಡೆದು ಸಂಪೂರ್ಣ ವೀರಶೈವರಾದರು. ಈ ಮಹಾಕಾರ್ಯದ ಸ್ಮರಣಾರ್ಥವಾಗಿ ಶ್ರೀ ಕೆ. ಬಸಪ್ಪನವರು ಈ 'ಹೊನ್ನ ಹಕ್ಕಿ' ಕವನ ಸಂಗ್ರಹ ವನ್ನು ಪ್ರಕಟಿಸಿದರು. ಇದರ ಎಲ್ಲ ವೆಚ್ಚವನ್ನು ನಿರ್ವಹಿಸಿದರು. ಅಲ್ಲದೆ ಎಲ್ಲ ಜನರ ದೀಕ್ಷಾ ಖರ್ಚನ್ನು ಸಹ ಇವರೇ ವಹಿಸಿಕೊಂಡರು. ಇವರುಗಳಿಗೆ ಶ್ರೀ ಜಗದ್ಗುರು ಕಂಬಸವೇಂದ್ರರು ಚಿರಾಯುರಾರೋಗ್ಯಭಾಗ್ಯಗಳನ್ನು ಚಿರ ಕೀರ್ತಿಯನ್ನು ಕೃಪೆಗೈಯಲೆಂದು ಹೃದಯಾರೆ ಹಾರೈಸೋಣವಾಗಿದೆ.

"ಹೊನ್ನ ಹಕ್ಕಿ" ಮೊದಲನೆಯದಾದ ಕವನ ಸಂಕಲನ. ಇದರಲ್ಲಿ ಭಾವಗೀತೆಗಳೊಡನೆ ಭಕ್ತಿಗೀತೆಗಳು ಬೆರೆದಿವೆ. ಇವುಗಳಲ್ಲಿ ಕೆಲವು 'ಜಯ ಕರ್ನಾಟಕ' 'ಸುಕುಮಾರ', 'ಶಿವಾನುಭವ', 'ಶರಣ ಸಾಹಿತ್ಯ' 'ಸುಬೋಧ', 'ಪ್ರಜಾಮತ' ಮುಂತಾದ ಪತ್ರಿಕೆಗಳಲ್ಲಿ ಹಿಂದೆಯೆ ಪ್ರಕಟ ವಾಗಿವೆ. ಆಯಾ ಪತ್ರಿಕಾ ಸಂಪಾದಕರನ್ನು ಶುಭ ಪರಂಪರೆಯೊಡನೆ ಸ್ಮರಿಸದಿರಲು ಸಾಧ್ಯವಿಲ್ಲ.

ಈ ಕವನಗಳಲ್ಲಿ ಆಗಾಗ ಮನಸ್ಸಿನಲ್ಲಿ ಮೂಡಿ ಬಂದ ಭಾವತರಂಗ ಗಳು ಕೆಲವು. ಆಯಾಸಮಯ ಸಂದರ್ಭವೊದಗಿದಾಗ ಯತ್ನಿಸಿ ಚಿತ್ರಿಸಿದವು ಕೆಲವು. ಹಿಂದಿನ ಶರಣರ ವಚನಗಳ, ಇಂದಿನ ಕವಿಗಳ ಕವನಗಳ ವಾಚನ ಪರಿಣಾಮದಿಂದ ಹೊರಹೊಮ್ಮಿದವು ಕೆಲವು. ಇವನ್ನೆಲ್ಲ ಅಲ್ಲಲ್ಲಿಂದ ಆಯ್ದು ಒಂದುಗೂಡಿಸುವ ಸೇವೆಯನ್ನು ಅಡ್ನೂರಿನ ಶ್ರೀ ಎ. ಎಂ. ಪ್ರಭುದೇವನು ನೆರವೇರಿಸಿದನು. ಕದಿರೇನಹಳ್ಳಿ (ವಿದುರಾಶ್ವತ್ಥ) ಯ ಶ್ರೀ ಕೆ. ಜಿ. ಬಸಪ್ಪನವರು ತಮ್ಮ ಮತ್ತು ತಮ್ಮ ಬಳಗದವರ ಶಿವದೀಕ್ಷಾ ಸಮಾರಂಭದ ಸ್ಮಾರಕಕ್ಕಾಗಿ ಪ್ರಕಟಿಸುವ ಉಚಿತ ಭಕ್ತಿಯನ್ನು ಉದಾರ ಭಾವವನ್ನು ತಾಳಿದರು. ಇವರಿಬ್ಬರ ಈ ಸೇವೆ ಸಹಾಯಗಳಿಂದ ಈ ಕವನ ಸಂಗ್ರಹವು ಈ ರೀತಿ ಓದುಗರ ಕೈಸೇರುವಂತಾಯಿತು. ಇವರುಗಳಿಗೆ ಜಗದ್ಗುರು ಪಂಡಿತಾಚಾರ್ಯರು ಚಿರಾಯುರಾರೋಗ್ಯ ಸೌಭಾಗ್ಯಗಳನ್ನುಂಟುಮಾಡಲಿ.

ಬೆಂಗಳೂರು.<br>೧೫-೮-೧೯೫೨

**ಶ್ರೀ ಜ. ಚ. ನಿ. ಸಂಸ್ಥಾನ.**

# ಪರಿವಿಡಿ

ಯ ಏಷೋ

ಅಂತರಾದಿತ್ಯೇ

ಹಿರಣ್ಮಯಃ

ಪುರುಷೋ

ದೃಶ್ಯತೇ

—ಛಾಂದೋಗ್ಯ

# ಹೊನ್ನು ಹಕ್ಕಿ

ಕನಕಪಕ್ಷಿ
ಕಣ್ಣಮುಂದೆ ಹಾರಿಹೋಯ್ತು
ಮನವೆ ಸಾಕ್ಷಿ
ಬಣ್ಣವೊಂದು ತಿಳಿಯದಾಯ್ತು ೧

ಹೊನ್ನುಹಕ್ಕಿ
ಕಣ್ಣಿನಂಚಿನಲ್ಲಿ ತನ್ನ
ಗೂಡನಿಕ್ಕಿ
ಚನ್ನಬದುಕು ಗಳಿಸಿಮುನ್ನ ೨

ಅಂದಿಸಿಂದ
ಕರಣ ಶಾಖೆಗಳಲಿ ಸುಳಿದು
ಅಂದದಿಂದ
ಹರಣವಾಂತು ಮನವ ಸೆಳೆದು ೩

ರೂಪು ರುಚಿಯು
ಶಬ್ದ ಸ್ಪರ್ಶ ಗಂಧವೂಡಿ
ಪಾಪ ಝರಿಯು
ತುಳುಕಿ ತುಂಬಿ ಸಿಡಿದು ನೋಡಿ ೪

ಹೊನ್ನು ಹಕ್ಕಿ
ಹೊನ್ನ ಶೂಲದಂತೆ ಕುಕ್ಕೆ
ಬಣ್ಣ ವುಕ್ಕಿ
ಬಣ್ಣಗೆಟ್ಟು ರುಚಿಯು ಕಕ್ಕೆ ೫

## ಹೊನ್ನು ಹಕ್ಕಿ

ಮೋಹಗಳಿಸಿ
ಕರ್ಮಜಾಲವೆಸಗ ಹಚ್ಚಿ
ದಾಹಗೊಳಿಸಿ
ಧರ್ಮಕಾರ್ಯಗಳನು ಮುಚ್ಚಿ ೬

ಮರುಳು ಮನವು
ಬಯಲ ನಂಬಿ ಬಗೆಯು ತುಂಬಿ
ಕರುಳು ಕೊರೆದು
ಸ್ವಯವಳಿದಿರೆ ಸುತ್ತಿಸಿಂಬಿ ೭

ನೂರು ವರುಷ
ಇರುವೆನೆಂದು ಗುಡಿಯು ಕಟ್ಟಿ
ತೋರಿ ನಿಮಿಷ
ತೊರೆದುದೇನು ಗಡಿಯು ಮೆಟ್ಟಿ ೮

ಚನ್ನಬಸವ
ತನ್ನ ಅಸುನ ಎಂದು ಮಾಡಿ
ಚನ್ನಜಸವ
ತನ್ನ ತನವ ಗಳಿಸದೋಡಿ ೯

ಕನಕಪಕ್ಷಿ
ಕಣ್ಣಮುಂದೆ ಹಾರಿ ಹೋಯ್ತು
ಮನಕೆ ಸಾಕ್ಷಿ
ಬಣ್ಣವೊಂದು ತಿಳಿಯದಾಯ್ತು ೧೦

# ಪ್ರಾರ್ಥನೆ

ಬಸಿರ ಬನದೊಳಗೆ
ಹೃದಯ ಕುಸುಮವರಳಲಿ
ಉಸಿರನಿಲವದರ
ಕಂಪುಹೊತ್ತು ಹರಡಲಿ ೧

ಕೊಳದೆ ಮನವೆಂಬ
ತಿಳಿಯು ನೀರು ತುಂಬಲಿ
ಒಳಗೆ ಚಲಿಸಗಲೆ
ಮಜ್ಜನಕ್ಕೆ ಸಲ್ಲಲಿ ೨

ಮಾಮರವು ಚಿಗುರಿ
ಚೈತ್ರಮಾಸ ಕೂಡಲಿ
ಪ್ರೇಮಕೋಕಿಲೆಯು
ಚೈತ್ರಗಾನ ಹಾಡಲಿ ೩

ಜ್ಞಾನ ಜ್ಯೋತಿಯದು
ನಂದದಂತೆ ಬೆಳಗಲಿ
ನಾಡ ಮಂಗಳಾ-
ನಂದದಿಂದ ಮೊಳಗಲಿ ೪

ಜೀವಪೂಜಕನ
ವಿಶ್ವಪೂಜೆ ನಡೆಯಲಿ
ದೇವ ದೇಶಿಕನ
ಶಾಂತಿಯೋಜೆ ದೊರೆಯಲಿ ೫

## ಕೊಳಲು!

೧

ಪ್ರತಿಯೊರ್ವರ ಕೊರಲು ಕೊಳಲು
ಶೃತಿಗೊಳುತಿದೆ ಪ್ರತಿದಿನದೊಳು,
ಮರಣ ತೃಣವ ಮೇಯಲೆಳೆವ—
ಕರಣ ಗೋವುಗಳನು ಪೊರೆವ;

೨

ಪೊರೆವ ಕಲೆಯ ತಿರುಳು ತಿಳಿದು
ಅಮರ ಮಧುರ ಗಾನ ಬರದು
ಹಸಿದ ಕರಣ ಗೋವುಗಳಿವು
ವಿಷಯ ಹಸುರಿಗೆಳಸದಿರವು

೩

ವಿನಯ ಗಾನವದುವೆ ಗಾನ
ಒಲಿದು ಹಾಡೆ ಮಧರ ಪಾನ
ಜೀವ ತಂತಿ ಮೀಟ ಹಾಡು
ದೇವ ಭ್ರಾಂತಿ ನಾಟ ಹಾಡು

೪

ವಿರತಿ ಗಾನವಿನಿದು ಗಾನ
ಮೊರೆದು ಹಾಡು ಹಾಕಿ ತಾನ
ಪ್ರೇಮ ರಾಗ ತೊಡೆದು ಹಾಡು
ಸಾಮ ರಾಗ ಮಿಡಿದು ಹಾಡು

೪

೫

ಕೂಗು ಕೋಗಿಲಾಗಿ ಮನವೆ
ಹೃದಯ ಶ್ರೀವಸಂತವದುವೆ
ಕೊರಳ ಕೊಳಲು ಶ್ರವಣಕಿಂಪು
ಕರುಳ ಕೊಳಲದಾತ್ಮ ತಂಪು.

# ತುಂಬಿ ನೋಡು !

೧

ಅಲ್ಲೊಂದು ಗೆರೆ ಇಲ್ಲೊಂದು ಗೆರೆ
ಎಲ್ಲೆಲ್ಲಿಯೂ ಗೆರಗಳೆಳೆದಿವೆ
ಚಿತ್ರಕನೆ, ರೇಖಾ ಚಿತ್ರವಿದು
ಇದಕೆ ಬಣ್ಣವ ತುಂಬಿ ನೋಡು.

೨

ಅಡಿಗೊಮ್ಮೆ ಮುಡಿಗೊಮ್ಮೆ ನುಡಿವೆ
ನುಡಿಯೊಳಗೆ ಸಾಧಿಸಿದುದೇನು ?
ನುಡಿಗಾರ, ಜೊಳ್ಳು ನುಡಿಯ ಬಿಡು
ನುಡಿಗೆ ನಡೆಯನು ತುಂಬಿ ನೋಡು.

೩

ಅದನಿದನು ನೋಡಿದೆಯೊ ನೀನು
ಜಗದೊಳು ನೋಡಮುಳಿದುದೇನು ?
ನೋಡುಗನೆ, ಕಣ್ ತನಿಸಲಳವೆ
ಜಗವ ಮನದೊಳು ತುಂಬಿ ನೋಡು.

೪

ಮುಟ್ಟಿ ನೋಡುವ ಚಟವ ನೀನು
ಬಿಟ್ಟು ಬಿಡು ಪಂಚೇಂದ್ರಿಯುಗಳ
ಸ್ಪರ್ಶಸುಖದಿಂದೇನು ? ಶಿವನ-
ಚರಣ ಮನದೊಳು ತುಂಬಿ ನೋಡು.

೬

## ಹೊನ್ನು ಹಕ್ಕಿ

೫

ಸವಿಯೂಟಗಳ ಬಯಸಬೇಡ
ದಿಟವರಿಯೆ ಏನುಂಡರೇನು ?
ರುಚಿಗಾರ, ಹಸಿವು ಹಿಂಗಿದೆಯೆ ?
ಮನಕೆ ತೃಪ್ತಿಯ ತುಂಬಿ ನೋಡು.

೬

ಅದನಿದನು ಓದಿದೆನಬೇಡ
ವೇದವೇದಾಂತವೋದೇನು ?
ವೈದಿಕನೆ, ಗಿಳಿಯೋದದೇನು ?
ವೇದಕನುಭವ ತುಂಬಿ ನೋಡು.

೭

ವ್ಯವಸಾಯ ವ್ಯಾಪಾರಗಳಲಿ
ಹಣಗಳಿಸಿ ತೃಷೆ ತೀರಲಿಲ್ಲ
ಹಣಗಾರ, ಗಳಿಕೆಗೆ ತುದಿಯೆಲ್ಲಿ ?
ಹಣಕೆ ಗುಣವನು ತುಂಬಿನೋಡು.

೮

ಬಡವರಲಿ ಭಾಗ್ಯಹೀನರಲಿ
ಕಡುಪಾಪಿ ಪರದೇಶಿಗಳಲಿ
ಸ್ವಾರ್ಥಶೀಲನೆ, ಕಠಿಣತೆಯನು
ತ್ಯಜಿಸಿ ಹೃದಯವ ತುಂಬಿ ನೋಡು.

೯

ಆಸತ್ತು ಬಾಳು ಸಾಕೆನಲು
ಬೇಸತ್ತು ತನುವು ಬೇಡೆನಲು
ತಾವೇನು ಬಿಟ್ಟೋಡುವವೆ ಹೇಳ್
ಆಯುಷ್ಯವದು ತುಂಬಿ ನೋಡು.

೧೦

ಕಸವಾಗಿ ಹುಟ್ಟಿರುವ ತುಂಬಿ
ಹಸುರಾಗಿ ಬೆಳೆದು ತೆನೆದುಂಬಿ
ವಾಸನೆಯನುಳಿದು ಹೂವಾಗಿ
ಈಶ ಶಿರದಲಿ ತುಂಬಿ ನೋಡು.

೧೧

ಹುಳಗಳಲಿ ಹುಟ್ಟಿರುವ ದುಂಬಿ
ಹೂವುಗಳ ಮಕರಂದ ತುಂಬಿ-
ತಂದು ಜೇನ್ಮಾಡಿಯೀಯುತಿದೆ,
ಮಾನವನಿಗದೊ ತುಂಬಿ ನೋಡು.

೧೨

ಮಳೆಯಿಲ್ಲ ಬೆಳೆಯಿಲ್ಲಿಳೆಯೊಳು
ಕಳೆಯಿಲ್ಲ ಸಮಸ್ತ ಜನರೊಳು
ಕಲಿಕಾಲವಿದೆಂದೆನ್ನದಿರು
ಒಳಿತು ಕಡಲವ ತುಂಬಿ ನೋಡು.

# ಅಳಿ - ಯು !!

೧

ಕೌಮಾರ ದೆಶೆಯು ಕೊನೆಗಾಣುತಿರೆ
ಯೌವನದ ದೆಸೆಯು ಕಾಲಿಡುತಲಿರೆ
ಹೆಣ್ಣಿನ ಗುಂಗು ಮನವನಡರುತಲಿರೆ
ಗುಯ್ಯೆಂದು ಗೊಣಗುತಿರುವವನೆ ಅಳಿ !

೨

ಕುಲವಧುವೆ ಬಾಳ್ಬಳ್ಳಿಹೂವಾಗಿ
ಕೈವಿಡಿದ ಗಂಡನೇ ಅಳಿಯಾಗಿ
ಹೂವಿನಾ ಬಂಡುಂಡು ಅಳಿಯುವನು
ಹೆಣ್ಣಿತ್ತ ಮಾವನಿಗಳಿಯನಾಗಿ !!

೩

ಕಾಯದೊಳಿರುವ ಮದವ ಹರಿದೊಗೆದು
ಮನಸಿನಾ ಮೋಹವನು ಮುರಿದುಳಿದು
ಈಶ್ವರನ ಪ್ರೆಮವನು ಪಡೆಯುತಿರೆ
ವಿಶ್ವದೊಳಗೆಂದಿಂದಿಗವನಳಿಯು !!!

# ಅರಸು !

ಮನೆಯೊಳರಸಿದರಿಲ್ಲ
ಊರೊಳರಸಿದರಿಲ್ಲ
ನಾಡೊಳರಸಿದರಿಲ್ಲ
ಕಾಡೊಳರಸಿದರಿಲ್ಲ ೧

ಕಾಡಿಯರಸಿದರುಂಟೆ
ಕೂಡಿಯರಸಿದರುಂಟೆ
ಬೇಡಿಯರಸಿದರುಂಟೆ
ಹಾಡಿಯರಸಿದರುಂಟೆ ? ೨

ಮನೆಯರಸಾದರೇನು
ಊರರಸಾದರೇನು
ನಾಡರಸಾದರೇನು
ನುಡಿಯರಸಾದರೇನು ? ೩

ನಾಡಕೊರತೆಯನರಸು
ನುಡಿಯ ಕುಂದುಗಳರಸು
ನ್ಯಾಯನೀತಿಗಳರಸು
ಆಯವ್ಯಯಗಳನರಸು. ೪

ಕುಂದು ಕೊರತೆಯ ಹರಿಸು
ಅಂದ ಚಂದವ ಬರಿಸು
ಅರ್ಥ ಅನ್ನವ ಬೆಳಸು
ವ್ಯರ್ಥ ವ್ಯಯವ ನುಳಿಸು. ೫

## ಹೊನ್ನ ಹಕ್ಕಿ

ಜನರನ್ಯಾಯವ ಬಿಡಿಸು
ಹಣದ ಆಯವ ಬೆಸಸು
ಮನದ ಮಾಯೆಯನಳಿಸು
ಜಗದಿ ಕೀರ್ತಿಯ ಗಳಿಸು ೬

ಇಂತು ಕರ್ಮವನೆಸಗೆ
ಕಂತು ಧರ್ಮವು ಮಸಗೆ
ನಾಡರಸಾಗಿ ಜಯವು
ನುಡಿಯರಸಾಗಿ ಫಲವು. ೭

ತನುವ ನರಸಲು ಬೇಕು
ಮನವನರಸಲು ಬೇಕು
ಧನವನರಸಲು ಬೇಕು
ತನ್ನೊಳಗರಸಬೇಕು ೮

ಕರಣಗಳರಸ ತಾನು
ಹರಣಗಳರಸ ತಾನು
ಇದನರಿಯುದರಸಿಯೇನು
ಅದಬೆರಸಲರಸ ತಾನು. ೯

# ನಲುಗನ್ನಡ

೧

ಓಃ ಕಾವ್ಯ ಬಾಲೆ
ಯಾವ ಕಬ್ಬ ಹಾಡಲೆ
ಎಂಥ ಭಾವ ತೋರಲೆ
ಎಂಥ ರಸವ ತುಂಬಲೆ ?

೨

ಮೌನವೇಕೆ ಹೇಳೆನೀ
ಮನದ ಬಯಕೆ ಕೇಳೆನೀ
ಯಾವ ಉಡಿಗೆ ಬೇಕದು
ಯಾವ ತೊಡಿಗೆ ಸಾಕದು.

೩

ನಿನ್ನ ಇಷ್ಟ ಹೊಳೆಯಿತು
ಎನ್ನ ತುಷ್ಟಿ ವೊಳೆಯಿತು
ನಿನ್ನ ಹೃದಯ ತಣಿಸಲು
ಇನ್ನು ಚನ್ನೆ ಹೆಣಗುವೆ.

೪

ನಲುಗನ್ನಡ ಹಾಡುವೆ
ಚಲುವ ಭಾವ ತೋರುವೆ
ಹಕ್ಕಿ ಉಲಿಯುವಂದದಿ
ರೆಕ್ಕೆ ತೆರೆವ ಚಂದದಿ.

ಸಮರಸವನು ತುಂಬುವೆ
ಸುಮದುಡುಗೆಯ ನುಡಿಸುವೆ
ಸುಗುಣ ಮಲಕು ತೊಡಿಸುವೆ
ಭಗಣ ತಿಲಕ ನಿಕ್ಕುವೆ.

೬

ಮನೆಯ ಗಿಳಿಯು ನುಡಿಯಲಿ
ಬನದ ನವಿಲು ಕುಣಿಯಲಿ
ಕಾವ್ಯರಾಗ ಮಿಡಿಯಲಿ
ದಿವ್ಯಯೋಗ ಕೂಡಲಿ.

೭

ನವರಸ ವಿದರಲ್ಲಿಯೆ
ನವಾಂಬರವಿದರಿಯೆ
ತವನಿಧಿಯಿದು ಭಾವಿಸು
ತವೆಕತ್ತುರಿಯಣಕಿಸು.

೮

ಕೆರೆಯ ನೀರು ತಂಪಹು
ತೊರೆಯ ನೀರು ಜಡವದು
ಕಡಲ ನೀರು ಉಪ್ಪದು
ಭಾವಿ ನೀರು ಸವಿಯದು.

೯

ಕೆರೆಯ ನೀರು ದೂರದು
ತೊರೆಯ ನೀರು ದೊರೆಯದು
ಕಡಲ ನೀರು ನಿಲುಕದು
ಬಾವಿ ನೀರು ಮನೆಯೊಳು.

೧೦

ನಲುಗನ್ನಡ ನುಡಿಯಿದು
ಚಲುಗನ್ನಡ ನಾಡಿದು
ಬಲುಗನ್ನಡ ಬಳಗಿದು
ಮೆಲುಗನ್ನಡ ಮಾತಿದು.

# ಸಂಜೆಯ ಸೂರ್ಯ

ದಿನಮಣಿಯು ದಿನವೆಲ್ಲ ನೀರಡಿಸಿ ಕಮಲದೊಳ-
ಗಣ ಮಧುರ ಮಕರಂದವನು ಅತಿಯಾಗಿ ಕುಡಿ-
ಕುಡಿದು ಮದಮತ್ತನಾಗಿ ಮೈಮರೆತು ಮಹಿಯಲ್ಲಿ
ಕುಡಕನೋಲ್ ಕಳಚಲ್ಕೆ ಕೆಮ್ಮೈಯ ತೊಟ್ಟಿಹನೋ ?

ಮಧ್ಯಮಣಿಯರ್ಧಮುಳುಗುತ ತನ್ನದಿಶೆಬಿಟ್ಟು
ಎದ್ದಿಲ್ಲಿ ಬಂದುದಕೆ ಸಂತಾಪಮಂಬಟ್ಟು
ರಾಗದೊಳು ರೋದಿಪನೋ ? ಮೇಣ್ ಬಡತನಕೆ ಪೆರರ
ಬಾಗಿಲವ ಪೊಗಬಾರದೆಂದು ಪ್ರತಿಬೋಧಿಪನೊ ?

ಏರಿದವನೆಂದಾದರಿಳಿಯುವುದು ನಿಶ್ಚಯವು
ಏರೇರಿ ಪ್ರಾಣಿಗಳ ಪೀಡಿಪುದು ದುಶ್ಚಟವು
ಏರಿಯಿಳಿದವಗಾಗುವುದದು ವೈ ಪಣ್ಣೆಂದು
ಸಾರಿ ಪೇಳುವನೊ ಜಗದೊಳಗಿರ್ಪ ಜನಗಳಿಗೆ

ಗಗನಮಣಿ ತನ್ನ ಕಿರಣಗಳೆಂಬ ಕರಗಳಿಂ-
ದಸ್ತಾಚಲದೊಳಿರ್ಪ ಮರಗಳನು ಪಿಡಿಪಿಡಿದು
ಮೆಲ್ಲಮೆಲ್ಲನೆ ಭೂಮಿಯೊಳಡಗಿದನೊ ? ಮೇಣು
ಕಲ್ಲೋಲವಾಗಿರ್ಪ ಕಡಲದೋಳ್ ಮುಳುಗಿದನೊ ?

ರವಿಯು ಬ್ರಹ್ಮಚಾರಿಗಳ ಓಜಸ್ಸಿಗೆ ಸೋತು
ನಿರ್ವೀರ್ಣ್ಯನಾಗಿ ಮುಳುಗುತ್ತಿರಲವನಿಂದಾ-
ಗುವ ಸುಸಂತಾಪವದು ಜಗವನ್ನು ಬಿಟ್ಟು ಜ-
ಕ್ಕವಕ್ಕಿಗಳ ಹೃದಯವ ಸಂದಣಿಸಿ ಸೇರಿಹುದೊ ?

# ಹೊನ್ನು ಹಕ್ಕಿ

ವಸುಧೆಯೊಳ್ ತನಗಾದ ಸೋಲಿನಿಂದುರಿದೇಳ್ದ
ಬಿಸಿಗೈಯು ಕಿಸುವಣ್ಣವೃಣ್ಕೆ ಗಗನಾಗ್ರವದು
ಕೆಂಗಲ್ಲೊ ? ಕೆಂಗಿರಿಯೊ? ಕೆಂಗಂಡಗಳ ತಂಡೊ?
ಕೆಂಗಡಲೊ ? ಎಂಬಂತೆ ಕಂಗೊಳಿಪುದಲ್ಲಲ್ಲಿ

ಕರಿಬಿಳಿಯ ಮೋಡಗಳು ಮುಸುಗಿರ್ದ ಮುಗಿಲಿನಾ–
ಮೆರೆವ ಪಡುವಣ ತಾಣ ತೆರೆಯುಳ್ಳ ನೊರೆಯುಳ್ಳ
ಪವಳ ಬಳಗದ ಪ್ರಖರಕಾಂತಿಯುಳ್ಳಾ ಸಾಗ-
ರವ ಸರ್ವರೀತಿಯಲಿ ಬಿಡದೀಗ ನಾಚಿಸಿತು

ತಮ್ಮ ಗೂಡನು ಸೇರುತಿಹ ಹಕ್ಕಿ ಹಿಂಡುಗಳ
ಒಮ್ಮನದ ಸಮ್ಮುದದ ನಿನದಂಗಳಿಂದ ಮೇಣ್
ಅಸ್ಪಷ್ಟ ಬೆಳಗಿನಿಂದ ಸಾಯಂಕಾಲವಿದು
ಸುಸ್ಪಷ್ಟ ಪ್ರಾತಃಸಮಯವಾದಂತಾಗಿಹುದು.

ಕೈಮುಗಿದು ನಿಂತಿರುವ ಕಮಲಗಳ ಮೇಲಿರುವ
ಪ್ರೇಮವನು ಬಿಟ್ಟಡಗುವೀ ಸಂಜೆಯ ಸೂರ್ಯನು
ಸಂಕಟದ ಸಮಯದೊಳ್ ಸಹೃದಯರ ಯಾಚನೆಯ
ಬಿಂಕದಲಿ ಮುರಿದು ಮಿತ್ರದ್ರೋಹದಿ ಮುಳುಗಿದನು.

## ತಂಗಾಳಿ

ಸುಳಿಯುತ ಸುಳಿಯುತ ಬರುವೆನು ಸಂತತ
ಬೇಸರವಿಲ್ಲವು ಎನಗಿನಿತು
ಸುಳಿಯುತ ಮುಗಿಲನು ಜಗವನು ತುಂಬುವೆ
ಬಿಸಿಲಿನ ತಾಪವ ತೂರುವೆನು ೧

ಅರಳುತ ನಲಿಯುವ ಹೂಗಳ ಮಧ್ಯದಿ
ಸೇರುತ ಗಂಧವನೀಂಟುವೆನು
ನಿಬಿಡದೆ ಬೆಳದಿಹ ಗಿಡಗಳ ಸೇರುತ
ಝುಣ್ಝರ ನಾದವ ಮಾಡುವೆನು ೨

ಮಲಯವ ಸೇರುತ ಮಂದಗೆ ಬೀಸುತ
ಚಂದನ ಗಂಧವ ಹೀರುವೆನು
ನನ್ನಯ ಗಮನವ ಮನ್ನಿಸಿ ಲತೆಗಳು
ಸ್ವಾಗತ ನೀಯುತ ಬಾಗುವವು ೩

ಮರಗಳ ಎಲೆಗಳು ಮರ್ಮರ ಮಾಡುತ
ಮಂದಗೆ ಗಾನವ ಮಾಡುವವು
ಜಲಗಳು ನನ್ನಯ ಗಮನಕೆ ಮೆಚ್ಚುತ
ತೆರೆಗಳ ಮಾಲೆಯು ಹಾಕುವವು ೪

ಅಲೆಯುತಲೀ ಬಗೆ ಗಂಧವ ಗ್ರಹಿಸುತ
ಜನಗಳ ತಾಪವ ಕಳೆಯುವೆನು
ಸುಳಿಯುತ ಸುಳಿಯುತ ಸೊಗಸದಿ ಸಂತತ
ಜಗದೊಳು ಶಾಂತಿಯ ಬೀರುವೆನು ೫

# ರಾಗಿಯು ಬೀಸೋಣ

ರಾಗಿಯು ಬೀಸೋಣ ರಾಗವ ಹಾಡೋಣ
ರಾಗಿಣಿಯರು ನೀವ್ ಬನ್ನಿರೇ ಪ

ರಾಗಿಯು ಬೀಸಿ ರೊಟ್ಟಿಯು ತಟ್ಟಿ
ಕ್ಷುದ್ರೋಗ ಬಾಧೆಯು ನೀಗೋಣ ೧

ರಾಗವ ಹಾಡಿ ರಂಜನೆಯು ನೀಡಿ
ಹೃದ್ರೋಗ ಕಾಟವ ಕಳೆಯೋಣ ೨

ಇದರೊಳಗಿರುವುದು ತಾನೆರಡರ್ಥ
ಅದನರಿದು ಹೇಳಲದು ಪುರುಷಾರ್ಥ ೩

## ಸ್ವಾಮಿ

೧

ಮಠದ ಸ್ವಾಮಿಯಾಗಿ
ಹಠದಿ ಸೊತ್ತು ಹೀರಿ ಮಲೆಯುತ
ವಿಗಡ ಜೀವಿಯಾಗಿ
ಸೊಗವ ಬಯಸುತಿಹನು ಸಂತತ

೨

ಕೃತಕ ಕೀರ್ತಿಗಾಗಿ
ಕೃತಕ ಜೀವಿಯಾಗಿ ಬಾಳುವ
ಸತ್ಯ ಹಿತವ ನೀಗಿ
ಮೃತ್ಯು ಪಥದಿ ತಾನು ಸಾಗುವ

೩

ಭಕ್ಷಣೆಯನು ಕೊಟ್ಟು
ಶಿಕ್ಷಕರನು ಇಟ್ಟು ಸ್ವಾಮ್ಯದಿ
ನೂರು ಜನಕೆ ಪಾಠ
ಸಾರಿಸುವನು ಸ್ವಾಮಿ ಸ್ವಾರ್ಥದಿ

## ಸಾಹಿತಿ

೧

ಗ್ರಂಥಗಳನು ಬರೆದು
ಪಂಥಗಳನು ಹರಿದು ಸಾಮ್ಯದಿ
ಸಾವಿರಾರು ಜನಕೆ
ಸವಿಯನುಣಿಪನು ನಿಸ್ವಾರ್ಥದಿ

೨

ಪಾಠ ಭಕ್ತನಾಗಿ
ಕೋಟಿ ವಿದ್ಯ ಹೀರಿ ಮುದದೊಳು
ಸರಳ ತನದಿ ಸುಖವ
ತೊರೆದು ಬಾಳುತಿಹನು ಜಗದೊಳು

೩

ಪ್ರಕೃತಿ ಚಲುವಿಗಾಗಿ
ವಿಕೃತಿ ಜೀವ ನೀಗಿ ಸಾಹಿತಿ
ಸುಕೃತ ಭಾವಿಯಾಗಿ
ಸತತ ನಡೆವನಿವನು ಸನ್ಮತಿ

೪

ಸಾಮ್ಯವಿಲ್ಲದಿರುವ
ಸ್ವಾಮಿ ಬಾಳು ಸಾಕು ಯುಗದೊಳು
ಸಾಹಿತ್ಯ ಒದಗಿರೆ
ಸಾಹಿತಿಯಾಗಬೇಕಿಳೆಯೊಳು.

# ಇದಕಾಗಿ ಇರಲಿ

೧

ಧನವಿರಲಿ ದಾನಕ್ಕೆ
ಮನವಿರಲಿ ಧ್ಯಾನಕ್ಕೆ
ತನುವಿರಲಿ ಪರಹಿತಕೆ ಲೋಕದಲ್ಲಿ
ಮಣಿಹವದು ತಾನಿರಲಿ ಸುಪಥದಲ್ಲಿ

೨

ಸತಿಯಿರಲಿ ಸೇವಿಸಲು
ಸುತನಿರಲಿ ಪಾಲಿಸಲು
ಹಿತಮಾರ್ಗ ಸಂತತದಿ ತೋರಿಸಲು
ಹಿತರಿರಲಿ ಹಗಲಿರುಳು ಹರುಷಿಸಲು

೩

ಶಿರವಿರಲಿ ವಂದಿಸಲು
ಕರವಿರಲಿ ಪೂಜಿಸಲು
ಅರಿವಿರಲಿ ತಿರೆಯೊಳಗೆ ತನಗಿಂತ
ಪರದೈವವಿಲ್ಲೆಂದು ತಿಳಿಯುವಂಥ

೪

ನಯುವಿರಲಿ ನುಡಿಯಲ್ಲಿ
ಭಯುವಿರಲಿ ನಡೆಯಲ್ಲಿ
ಜಯುವಿರಲಿ ದುರ್ಗುಣದಮನದಲ್ಲಿ
ದಯೆಯಿರಲಿ ಸರ್ವ ಜೀವರುಗಳಲ್ಲಿ.

# ಆತ ಮುಕ್ತ

ಆತ ಮುಕ್ತ ಆತ ಮುಕ್ತ
ತನ್ನ ತಾನರಿದವ ಮುಕ್ತ

ಸುಳ್ಳು ಮಾತುಗಳನು ಸುಟ್ಟು
ಕಳ್ಳತನದ ಕೆಲಸಬಿಟ್ಟು
ಒಳ್ಳೆತನದ ಹಾದಿ ತೊಟ್ಟು
ತನ್ನ ತಾನರಿದವ ಮುಕ್ತ ೧

ಮೂಢ ಜನರ ಸಂಗ ಹರಿದು
ಹೇಡಿತನದ ವೃತ್ತಿ ತೊರೆದು
ನಾಡಸೇವೆಯಲ್ಲಿ ಬೆರೆದು
ತನ್ನ ತಾನರಿದವ ಮುಕ್ತ ೨

ಮೂರು ಮಲಗಳನ್ನು ತೊಳೆದು
ಮೂರು ತಾಪಗಳನು ತುಳಿದು
ಆರು ವೈರಿಗಳನು ಸೆಳೆದು
ತನ್ನ ತಾನರಿದವ ಮುಕ್ತ ೩

ತಾನು ದೇಹವಲ್ಲವೆಂದು
ತಾನು ಪ್ರಾಣವಲ್ಲವೆಂದು
ತಾನು ಬುದ್ಧಿಯಲ್ಲವೆಂದು
ತನ್ನ ತಾನರಿದವ ಮುಕ್ತ. ೪

# ಕರುಣ

೧

ನೆಮ್ಮಿ ನಿಲಲು
ಹೊಮ್ಮಿ ಬರಲು
ಕರುಣ ಕಿರಣ ಜ್ವಾಲನ
ಮರೆವು ಅಳಿದು
ಅರಿವು ಬಲಿದು
ಮೆರಗುವಹುದು ಜೀವನ !

೨

ನುಡಿಯೊಳಿಲ್ಲ
ನಡೆಯೊಳಿಲ್ಲ
ನಯವು ತುಂಬಿ ಬಪ್ಪುದು
ಕರ್ಮ ಕಳೆದು
ಧರ್ಮ ಬೆಳೆದು
ಲೋಕ ಪ್ರೀತಿ ತಪ್ಪದು

೩

ಜೀವ ಶುದ್ಧಿ
ಭಾವ ಸಿದ್ಧಿ
ದೇವ ಕರುಣವಿರಲದು
ದಿವ್ಯವಾಗಿ
ಭವ್ಯವಾಗಿ
ಬೆಳಗಲಹುದು ಜಗಕದು

೪

ಕರಣ ಹೋಗಿ
ಕಿರಣವಾಗಿ
ಕರುಣವಿರಲು ಬಾಳಿಹ
ಹರಣದೊಳಗೆ
ಚರಣ ತೊಳಗೆ
ಹರನ ರೂಹು ತಾಳಿಹ !

# ವಿಶ್ವಾತ್ಮಾ - ಪರಮಾತ್ಮಾ

೧

ಗಗನವೆ ನಾಭಿಯು, ವಹ್ನಿಯೆ ವದನವು,
ಉದಕವೆ ರೇತವು, ನಿನಗಾತ್ಮಾ
ದಿಶಗಳೆ ಕಿವಿಗಳು, ವ್ಯೋಮವೆ ಶೀರ್ಷವು,
ಪಾದವೆ ಭೂಮಿಯು, ಪರಮಾತ್ಮಾ !

೨

ಮನಸವೆ ಚಂದ್ರನು, ಹೃದಯವೆ ಧರ್ಮವು,
ರೋಮಗಳಾಗಿಹವೌಷಧಿಗಳ್
ಸೂರ್ಯನೆ ಬುದ್ಧಿಯು, ಮಾಯಯೆ ಶಕ್ತಿಯು,
ಕೇಶಗಳಾಹವು ಮೇಘಂಗಳ್

೩

ಹಣೆಯೇ ಸ್ವರ್ಗವು, ಹಾರವೆ ತಾರೆಗ-
ಳಾದವು ನಿನಗಲೆ ಭೂತಾತ್ಮಾ
ಸೊತ್ತವೆ ಕತ್ತದು, ಮೃತ್ಯುವೆ ಹೊಟ್ಟೆಯು
ಕತ್ತಲೆ ಗುಡ್ಡಿಯು ಜಗದಾತ್ಮಾ

೪

ನೇತ್ರಗಳೇ ಸತ್ವರಜಸ್ತಮಗಳು
ಸೊತ್ರವೆ ಗಾಳಿಯು ಸರ್ವಾತ್ಮಾ !
ಕರಗಳೆ ಪ್ರಜಗಳು ಸೌಖ್ಯವೆ ರಕ್ತವು
ಬ್ರಹ್ಮಾಂಡವೆ ತನು ವಿಶ್ವಾತ್ಮಾ.

# ತಂದೆ-ಬಂದೆ

೧

ತಂದೆ ಶಿವನೆ ತಂದೆ
ಜಗಕೆ ತಂದೆ
ಭವಕೆ ತಂದೆ
ಎನ್ನ ನೀನು

೨

ಬಂದೆ ಶಿವನೆ ಬಂದೆ
ಜೀವನಾಗಿ
ದೇವನಾಗಿ
ನಾನು-ನೀನು

೩

ತಂದೆ ಏನು ತಂದೆ
ಜನನ ತಂದೆ
ಮರಣ ತಂದೆ
ನನಗೆ ನೀನು

೪

ಬಂದೆ ಎಂದು ಬಾದೆ
ಈಗ ಬಂದೆ
ಆಗ ಬಂದೆ
ಎಳೆಯು ಹಳೆಯು

೫

ತಂದೆ ನಾನು ತಂದೆ
ಏನು ತಂದೆ
ಏಕೆ ಬಂದೆ
ತಂದೆ ಬಂದೆ

೬

ಬಂದೆ ಹೇಗೆ ಬಂದೆ
ನೀನು ತಂದೆ
ನಾನು ಬಂದೆ
ತಂದೆ ಬಂದೆ

೭

ತಂದೆ ಶಿವನೆ ತಂದೆ
ಕರ್ಮ ತಂದೆ
ಧರ್ಮ ತಂದೆ
ನಿನಗೆ ನಾನು

೮

ಬಂದೆ ಶಿವನೆ ಬಂದೆ
ನಂಬಿ ಬಂದೆ
ತುಂಬಿ ಬಂದೆ
ನಾನು-ನೀನು

೯

ತಂದೆ ಶಿವನೆ ಬಾದೆ
ತಂದೆಯಾಗಿ
ಬಂದೆಯಾಗಿ
ತಂದೆ–ಬಂದೆ

೧೦

ತಾದೆ ಶಿವನೆ ಬಂದೆ
ಕರ್ಮಿಯಾಗಿ
ಧರ್ಮಿಯಾಗಿ
ತಂದೆ–ಬಂದೆ

೧೧

ತಂದೆ ಶಿವನೆ ತಂದೆ
ಪ್ರಾಣ ತಂದೆ
ತ್ರಾಣ ತಂದೆ
ಒಳಗೆ-ಹೊರಗೆ

೧೨

ಬಂದೆ ಶಿವನೆ ಬಂದೆ
ಜೀವ ತಂದೆ
ದೇವ ಬಂದೆ
ಇಲ್ಲಿ–ಅಲ್ಲಿ

೧೩

ತಂದೆ ಶಿವನೆ ತಂದೆ
ಇಹಕೆ ತಂದೆ
ಪರಕೆ ತಂದೆ
ತಂದೆ–ತಂದೆ

೧೪

ಬಾದೆ ಶಿವನೆ ಬಂದೆ
ಇಹಕೆ ಬಂದೆ
ಪರಕೆ ಬಂದೆ
ಬಂದೆ–ಬಂದೆ

೧೫

ತಂದೆ ಜಗಕೆ ಬಂದೆ
ತಂದೆ, ನಿನ್ನ
ಬಳಿಗೆ ಬಂದೆ
ತಂದೆ–ಬಂದೆ.

# ಪೂರ್ವೋತ್ತರ !

ಮೂಡಲ ದಿಕ್ಕು
ಬಡಗಲ ದಿಕ್ಕು
ಕಡು ಮಿಗಿಲಾವುದು ಭುವನದೊಳು
ಪ್ರಾಪ್ತಿಯ ನೋಡೆ
ಪೂಜೆಯ ಮಾಡೆ
ಪೂರ್ವೋತ್ತರ ಸಮದಿಕ್ಕುಗಳು

ಆಶ್ರಮ ವೆರಡು
ಈ ಶ್ರಮ ನೋಡು
ಉತ್ತರದಾಶ್ರಮ ವರ್ಣಿಪರು
ಪೂರ್ವಾಶ್ರಮವು
ಪೂರಾ-ಶ್ರಮವು
ಎಂಬಾ ಮಾತನು ಹೇಳುವರು

ಜನ್ಮವು ಬಂದ
ಜೀವನ ತಂದ
ಪೂರ್ವೋತ್ತರಗಳ ಕೇಳುವರು
ಜನ್ಮದ ಗತಿಯು
ಜೀವನ ಸ್ಥಿತಿಯು
ಪೂರ್ವೋತ್ತರ ಕಂಡವರಾರು ?

## ಹೊನ್ನು ಹಕ್ಕಿ

ಮೂಡಲ ಚುಕ್ಕಿ
ಕತ್ತಲು ಮುಕ್ಕಿ
ಸುತ್ತಲು ಬೆಳಕನು ಹರಡುವುದು
ಉತ್ತರ ಧ್ರುವವು
ಉತ್ತಮ ಪದವು
ಉತ್ಕರ ಭಾಗ್ಯವ ನೀಡುವುದು ೪

ಪೂರ್ವದ ಬುತ್ತಿ
ಇರೆ ಬೆಂಬತ್ತಿ
ಉತ್ತರ ಮಾರ್ಗವು ಸಾಗುವುದು
ಉತ್ತರದರ್ಥ
ಹತ್ತಿರೆ ಸಾರ್ಥ
ಮುತ್ತಿದ ದುರ್ಗವು ನೀಗುವುದು ೫

ಪೂರ್ವದ ಜನ್ಮ
ಪೂರ್ವದ ಕರ್ಮ
ಕಳೆಯಲು ಲೋಕವು ಬಾಳುವುದು
ಉತ್ತರ ಧರ್ಮ
ಉತ್ತಮ ಮಾರ್ಗ
ತಳೆಯಲು ನಾಕವು ಬೆಳಗುವುದು. ೬

# ಪ್ರಮಥರ ಪೂಜೆ

"ಶಿವಲಿಂಗ ಪೂಜೆಯಿಂದ ಭಕ್ತಿ ದೊರಕುಂಬುದು ; ಮುಕ್ತಿ ದೊರಕುಂಬುದು 'ಶಿವಲಿಂಗ ಪೂಜೆಗೆ ಸರಿಯೊಂದಿಲ್ಲ.' ವೆಂದು ಪುರಾತನರು ಶಿವಲಿಂಗ ಪೂಜೆಯುಮಾಡಿ ಶಿವನೊಳಗಾದರು. ಇದನರಿತು ಮತ್ತೇಕೆ ಮರೆವಿ ಮರುಳ ಮಾನವರುಗಳಿರಾ ! ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ಪೂಜೆಯ ಮಾಡಿರಣ್ಣಾ !!

ಲಿಂಗ ಪೂಜೆಯಿಂದ ಭಕ್ತಿ
ಲಿಂಗ ಪೂಜೆಯಿಂದ ಮುಕ್ತಿ
ಲಿಂಗ ಪೂಜೆಗೊಂದು ಸಾಟಿಯಿಲ್ಲ ಜಗದೊಳು

ಶಿವನ ಪೂಜೆಗೆಂದು ಸಕಲ
ನವ ನವ ಪ್ರಸೂನಗಳನು
ಜವದಲಾಯ್ದು ಕೊಯ್ದು ಭಕ್ತಿಯಿಂದ ತರುವರು

ಪುಷ್ಪಧರಿಸಿ ಬೆಳಗನೆತ್ತಿ
ಧೂಪವಿಕ್ಕಿ ರುಚಿಯನಿತ್ತು
ಪಾಪವುರುಳಿ ಹರುಷವೇರಿ ಮಿಾರಿನಲಿದರು

ಪೂಜೆಮಾಡಿ ನೋಡಿ ನಲಿದು
ತೇಜಗೊಂಡು ಕೂಡಿ ಶಿವನ
ಓಜೆಯಿಂದಲಾಡಿ ಪಾಡಿ ಹರುಷದಿಂ

ಶಿವನೆ, ಶಿವನೆ, ಶಿವನೆ, ಎನುತ
ಭವನೆ, ಭರ್ಗ, ಭೀಮನೆನುತ
ಶಿವನ ಸವಿಯ ನಾಮದಿಂದ ಹಿಗ್ಗಿ ಹೆಚ್ಚಿದರ್

## ಹೊನ್ನು ಹಕ್ಕಿ

ಇಂದುಶೇಖರಂಗೆ ನಮಿಸಿ
ತಂದೆ, ತಾಯಿ, ಬಂಧು ನೀನು
ಎಂದು ನೇಹದಿಂದ ನಲಿದು ನಚ್ಚಿ ನುಡಿದರು

ಸೊಂಪು ಸೊಗಸಿ ಲೀಲೆಯಿಂದ
ಕಂಪು ಬೀರಿ ಯೋಗದಿಂದ
ತಂಪುದೋರಿ ಶಾಂತಿಯಿಂದ ಶಿವನ ಯಜಿಸಿದರ್

ಭಕ್ತಿಭಾವದಿಂದ ನಿರುತ
ಯುಕ್ತ ಕಾಯಕಂಗಳಿಂದ
ಮುಕ್ತಿ ಮಾರ್ಗವರಿತು ಭರದಿ ಶಿವನ ಭಜಿಸಿದರ್

ಕಾಮ ಕೋಪಗಳನು ಹುರಿದು
ಪ್ರೇಮ ಪಾಶಗಳನು ಹರಿದು
ಸೋಮ ಪೂಜೆಯಲ್ಲಿ ಬೆರೆದು ಮೃಡನ ತಣಿಸಿದರ್

ನಿತ್ಯನೇಮ ಯುಕ್ತರೆನಿಸಿ
ಸತ್ಯಮನದ ಧನದರೆನಿಸಿ
ಸ್ತುತ್ಯವಾದ ಶಿವನಪೂಜೆ ಮಾಡಿದರ್

ಇಂತು ಶಿವನ ಪೂಜೆ ಮಾಡಿ
ಕಂತುಹರನ ಜವದಿ ಕೂಡಿ
ಶಾಂತಿ ರಸದ ಸವಿಯ ಸವಿದು ಸತತ ಸುಖಿಸಿದರ್

ಅರಿದಿದನ್ನು ಮತ್ತದೇಕೆ
ಮರೆವರಯ್ಯ ಮರುಳ ಜನರೆ
ನೆರೆಸ್ವತಂತ್ರ ಸಿದ್ಧಲಿಂಗ ಪೂಜೆಗೊಳ್ಳಿರೈ.

# ಏನು ಮಾಡಿದರೇನು ?

೧

ಚನ್ನ ಗಿರಿಶನೆ ಶಾಂತವಾದಾ
ನಿನ್ನ ಸನ್ನಿಧಿಯನ್ನು ತೊರೆದು
ಬಣ್ಣ ಬಡುತಂ ಸಣ್ಣಗಾಗುವೆ ಭವದ ಕೋಟಲೆಯಿಂ
ಹೊನ್ನ ಮೊದಲಾದಖಿಲ ಸಂಪದ
ದುನ್ನತಿಯನಾಂ ಬಯಸಿ ಬಂದೆನು
ನಿನ್ನ ಕೊರತೆಯನರಿತು ಭುವಿಯೊಳು ಬಳಲಿ ತೊಳಲುವೆನು

೨

ಮನೆಗೆ ಸಾರಣೆಯಿಕ್ಕಿ ಕಾರಣೆ
ಯನುಗೊಳಿಸಿ ಹೊಸ ಬಟ್ಟೆ ಯುಡುತಲಿ
ಮನದಿ ಮಂತ್ರವ ಜಪಿಸಿ ಪೂಜಿಸಿ ಹಾಡಿ ಹರಸಿದೆನು
ತನುವ ದಂಡಿಸಿ ಹೂವು ತಂದೆನು
ದಣಿವು ಖಂಡಿಸಿ ಧ್ಯಾನಮಾಡಿದೆ
ಮನದ ಕೊನೆಯೊಳು ಮಾತ್ರ ನಿನ್ನನು ಕಾಣದಳಲಿದೆನು

೩

ಭರದಿ ಬೀಸುವ ಗಾಳಿ ಕೇಳಿದೆ
ಹರಿದು ಹೋಗುವ ನೀರ ಕೇಳಿದೆ
ಧರೆಯ ಬೆಳಗುವ ಬೆಂಕಿ ಕೇಳಿದೆ ನಿನ್ನ ಪಡೆಯಲ್ಕೆ
ಹರನೆ ! ನಿನ್ನಯ ಜ್ಞಾನವಿರದಲ–
ವರೆನಗುತ್ತರವನ್ನು ಕೊಡದಲೆ
ತಿರುಗಿ ಹೋದರು ಮೌನದಿಂದಿನ್ನೇನು ಮಾಡಲಿ ಪೇಳ್

೪

ಯೋಗ ಮಾಡಿದೆ ಕರಣ ತಡೆಯುತ
ಭೋಗ ಮಾಡಿದೆ ಸಕಲ ವಿಷಯವ
ತ್ಯಾಗ ಮಾಡಿದೆ ನಿಖಿಲ ನಿರ್ಧನ ಜನರ ಮನದಂತೆ
ಸಾಗಿ ಹೋದೆನು ಸಕಲ ತೀರ್ಥಕೆ
ಬಾಗಿ ಬೇಡಿದೆ ನಖಿಲ ದೈವವ
ನೀಗಿ ಹೋಯಿತು ಕರ್ಮವೆಲ್ಲವು ನಿನ್ನ ಕಾಣದಲೆ

೫

ಮರೆತು ಮಾಡಿದ ಪಾಪ ನನ್ನದು
ಅರಿವ ನೀವುದು ನಿನ್ನ ಧರ್ಮವು
ಕರುಣಸಾಗರ ಕಾಯೋ ದಾರುಣ ಭವದ ಬಳಲಿಕೆಯಿಂ
ಸ್ಮರಿಸಿ ಪಾಡಿದುದಾಯಿತೆಲ್ಲವು
ಚರಿಸಿ ಕೇಳಿದುದಾಯಿತೆಲ್ಲವು
ಪರಮ ಪಾವನ ಪೊರೆಯೊ ಬೇಗದಿ ಶರಣು ಹೊಕ್ಕಿರುವೆ

೬

ನಿನ್ನ ಕಣ್ಣುಗಳೊಲಿಯುವಂದದಿ
ಬಣ್ಣ ಬಣ್ಣದ ಕುಸುಮ ಧರಿಸಿದೆ
ನಿನ್ನ ಮನ ಮೆಚ್ಚಿಸಲು ಚಂದದಿ ಗಾನಮಾಡಿದೆನು
ಸಾನುರಾಗದಿ ಕೂಡಿ ಸೊಗಸದ-
ಲೇನು ಮಾಡಿದರೇನು ಮೋಹದಿ
ಜ್ಞಾನವಿರಹಿತರಾಗಿ ನಿನ್ನಯ ಕರುಣವಿಲ್ಲದಲೆ.

# ಗುರು ಗೀತೆ

ಗುರುವಿನ ಹಿರಿಮೆಯ ಹೊಗಳುವೆ ಚಂದ
ಹರುಷದೊಳಾಲಿಸು ಪಾಲಿಸು ಕಂದ

ಸಂಸೃತಿ ಸಾಗರ ದಾಟುವೆ ನೀನು
ಸಂಸ್ಕೃತಿ ತಂತಿಯ ಮೀಟುವೆ ನೀನು
ಭವದೊಳು ಸಿರಿಯನು ಪಡೆಯುವೆ ಜಾಣ
ಜವದೊಳು ಸರಸನ ಮಾಡುವೆ ಜಾಣ
ಗುರುವಿನ ಕರುಣವು ಜನಕದು ಪ್ರಾಣ
ಗುರುವಿನ ಕಿರಣವು ಜನಕದು ತ್ರಾಣ
ಗುರು ಹರಿಸಲು ಹೋಹುದು ಪರತಂತ್ರ
ಗುರು ಹರಸಲು ಬಪ್ಪುದು ಸ್ವಾತಂತ್ರ ೮

ಗುರುವೇ ಜಗದೊಳು ಮಾನ್ಯನು ಕೇಳು
ಗುರುವಿನ ಮಹಿಮೆಯನೊರೆಯುವೆ ತಾಳು
ಗುರುವಿನ ಬೋಧೆಯದಿಲ್ಲದೆ ತಾನು
ಪರತರ ವೇದವು ಹೊಳೆಯದು ಮಾಣು
ತಾನಾರೆಂಬುದು ತಿಳಿಯದ ಮುನ್ನ
ತಾನೆಲ್ಲಿಗೆ ಹೋದರದೇಂ ಚನ್ನ
ಗುರುವಿನ ಕರುಣೆಯ ಪಡೆಯದ ಮುನ್ನ
ಪರಮನ ಕಾಂಬುದು ನಿನಗದು ಬನ್ನ ೧೬

ಗುರುವೇ ಇಹದಲಿ ಪೊರೆಯುವ ಬಂಧು
ಗುರುವೇ ವಿಜ್ಞಾನಾಮೃತ ಸಿಂಧು

ಹೊನ್ನು ಹಕ್ಕಿ

ಗುರುವೇ ಕತ್ತಲ ಹರಿಯುವ ತೇಜ
ಗುರುವೇ ಧೈರ್ಯವ ತುಂಬುವ ಓಜ
ಗುರುವೇ ಭಕ್ತಿಯ ರಾಷ್ಟ್ರದ ರಾಜ
ಗುರುವಿನ-ಸೇವೆಯು ನಿನಗದು ಸಾಜ
ಗುರುವೇ ಶಾಂತಿಯ ಬಾನಿನ ಚಂದ್ರ
ಗುರುವೇ ಭ್ರಾಂತಿಯ ದಮನಿಸುವಿಂದ್ರ ೨೪

ಗುರುವೇ ಶಾಶ್ವತ ಸೌಖ್ಯದ ಸುಗ್ಗಿ
ಗುರುವಿನ ಕರುಣೆಯ ಪಡೆ-ನೀ ಹಿಗ್ಗಿ
ಗುರುವನು ಮನ್ನಿಸು ಅನುದಿನ ತಗ್ಗಿ
ಗುರುವನು ವಂದಿಸು ಮುದದೊಳು ಬಗ್ಗಿ
ತೆರೆವುದು ನಿನ್ನಯ ಅರುವಿನ ಕಣ್ಣು
ದೊರೆವುದು ಅಮೃತದ ತನಿರಸ ಹಣ್ಣು
ಅಳಿವುದು ನಿನ್ನಯ ಜನ್ಮದ ಹುಣ್ಣು
ಬಲಿವುದು ನಿನ್ನಯ ಭಾಗ್ಯದ ಬೆನ್ನು ೩೨

ರೋಗವ ಕಳೆವುದು ಗುರುವಿನ ಮುದ್ದು
ಯೋಗವ ಕೊಡುವುದು ಗುರುವಿನ ವಿದ್ಯೆ
ಭೋಗವನೀವುದು ಗುರುವಿನ ನಿಧಿಯು
ತ್ಯಾಗವ ಹೇಳ್ವುದು ಗುರುವಿನ ವಿಧಿಯು
ಗುರುವೇ ಸತ್ಯದ ಸೃಷ್ಟಿಯ ಬ್ರಹ್ಮ
ಗುರುವೇ ಮಾನಸ ಪಾಲನ ವಿಷ್ಣು
ಗುರುವೇ ದುರ್ಗುಣ ಸಂಹರ ರುದ್ರ
ಗುರುವೇ ಸಕಲಾನುಗ್ರಹ ಭದ್ರ ೪೦

ಶಕ್ತಿಯ ಕೊಡುವುದು ಗುರುವಿನ ಗುಟುಕು
ತೃಪ್ತಿಯ ಕೊಡುವುದು ಗುರುವಿನ ಚುಟುಕು
ಭಕ್ತಿಯ ಕೊಡುವುದು ಗುರುವಿನ ಕಟ್ಟು
ಮುಕ್ತಿಯ ಕೊಡುವುದು ಗುರುವಿನ ಗುಟ್ಟು
ಚಿಂತೆಯನಳಿಪುದೆ ಗುರುವಿನ ನೀತಿ
ಕಂತೆಯ ಕಳೆವುದೆ ಗುರುವಿನ ರೀತಿ
ಭೀತಿಯ ತೊಡೆವುದೆ ಗುರುವಿನ ಶಿಕ್ಷೆ
ಜಾತಿಯ ನಶಿಪುದೆ ಗುರುವಿನ ದೀಕ್ಷೆ ೪೮

ಗುರುವಿನ ತನುವೇ ಸದ್ಗುಣ ಬೆಳೆಯು
ಗುರುವಿನ ಮನವೇ ಶಾಂತಿಯ ಸೆಲೆಯು
ಗುರುವಿನ ಬುದ್ಧಿಯೆ ಜ್ಞಾನದ ಬೆಳಗು
ಗುರುವಿನ ಭಾವವೆ ಮುಕ್ತಿಯ ಸೊಗಸು
ಗುರುವೇ ನಿನ್ನಯ ದೇವರ ದೇವ
ಗುರುವೇ ನಿನ್ನಯ ಜೀವದ ಜೀವ
ಗುರುವೇ ಸಂತತ ಸಕಲರ ದೇವ
ಗುರುವೇ ಸಂತತ ಸಕಲರ ಕಾವ ೫೬

ಗುರುವಚನದಿ ಸಲೆ ನಡೆವುದೆ ಧರ್ಮ
ಗುರುವಚನವ ಮೀರದಿರುವುದೆ ಕರ್ಮ
ಗುರುಬೋಧೆಯ ಕೇಳುವುದೇ ಪುಣ್ಯ
ಗುರುದೀಕ್ಷೆಯ ಪೊಂದುವುದೇ ಭಾಗ್ಯ
ಗುರುವಿನ ಸ್ಥಾನವ ರಕ್ಷಿಪ ಧನ್ಯ
ಗುರುವಿಗೆ ಆಪ್ತನು ಆದವ ಮಾನ್ಯ
ಗುರುವಿನ ನೇಮವನರಿದವ ಜ್ಞಾನಿ
ಗುರುವಿನ ನಾಮವ ನೆನೆವವ ಧ್ಯಾನಿ ೬೪

## ಹೊನ್ನ ಹಕ್ಕಿ

ಗುರುವೇ ನಿನ್ನಯ ಹೆತ್ತಿಹ ತಾಯಿ
ಗುರುವೇ ನಿನ್ನಯ ಹೊತ್ತಿಹ ತಂದೆ
ಗುರುವೇ ಕ್ಷೇಮವ ಕೋರುವ ನೆಂಟ
ಗುರುವೇ ಕ್ಷಾಮವ ಕಳೆಯುವ ಬಂಟ
ಗುರುವೇ ನಿನ್ನಯ ನಚ್ಚಿನ ಗಂಡ
ಗುರುವೇ ನಿನ್ನವಗುಣ ಪ್ರಚಂಡ
ಗುರುವೇ ನಿನ್ನನು ತೋರುವ ದೇವ
ಗುರುವಿಗೆ ಬೇರಿನ್ನಿಲ್ಲವು ದೇವ ೯

ಗುರುವೇ ಕಲಿಸಿದರುಂಟೈ ಮಾತು
ಗುರುವೇ ಕಲಿಸಿದರುಂಟೈ ಬಾಳು
ಗುರುವೇ ಕಲಿಸಿದರುಂಟೈ ವಿದ್ಯೆ
ಗುರುವೇ ಕಲಿಸಿದರುಂಟೈ ಬುದ್ಧಿ
ಶ್ರೀಗುರು ಕಲಿಸಲು ಅದುವೇ ರೀತಿ
ಶ್ರೀಗುರು ಕಲಿಸಲು ಅದುವೇ ನೀತಿ
ಶ್ರೀಗುರು ದಾರಿಯ ತೋರಲು ಮಾರ್ಗ
ಶ್ರೀಗುರು ದಾರಿಯ ಬೀರಲು ಸ್ವರ್ಗ ೧೦

ಗುರುವಿನ ಅಮೃತದ ನುಡಿಯದು ರನ್ನ
ಗುರುವಿನ ಅಮರದ ನಡೆಯದು ಚನ್ನ
ಗುರುವಿನ ಮಾತದು ಜಪಿಸಲು ಮಂತ್ರ
ಗುರುವಿನ ಬೋಧೆಯು ನಿನಗದು ತಂತ್ರ
ಗುರುವಿನ ಧ್ಯಾನವು ಭಕ್ತಿಗೆ ಮೂಲ
ಗುರುವಿನ ಕೃಪೆಯದು ಮುಕ್ತಿಗೆ ಮೂಲ
ಗುರುವೇ ಲಿಂಗವು ಪೂಜಿಸು ಒಲಿದು
ಗುರುವೇ ಜಂಗಮ ಸೇವಿಸು ನಲಿದು ೧೧

ಗುರುವಿನ ಭಸ್ಮವ ಧರಿಸೈ ನಿತ್ಯ
ಗುರುವಿನ ಮಂತ್ರವ ಜಪಿಸೈ ತಥ್ಯ
ಗುರುವಿನ ತೀರ್ಥವ ಸಲಿಸೈ ಪಥ್ಯ
ಗುರುವಿನ ವಾಸವೆ ಕಾಸಿಯು ಸತ್ಯ
ಗುರುವಿಗೆ ಉಡುಗರೆ ಉಡಿಸೈ ನೀನು
ಗುರುವಿಗೆ ವಾಸವ ರಚಿಸೈ ನೀನು
ಗುರುವಿಗೆ ತೃಪ್ತಿಯು ಪಡಿಸೈ ನೀನು
ಗುರುವಿಗೆ ಕಾಣಿಕೆ ಸಲಿಸೈ ನೀನು ೯೬

ಶ್ರೀಗುರು ನಿನ್ನಯ ಕಲ್ಪಿಸು ವೃಕ್ಷ
ಶ್ರೀಗುರು ನಿನ್ನಯ ಕಾಮಸುಧೇನು
ಶ್ರೀಗುರು ನಿನ್ನಯ ಸೃಷ್ಟಿಯ ಬ್ರಹ್ಮ
ಶ್ರೀಗುರು ನಿನ್ನಯ ರಕ್ಷಣ ವಿಷ್ಣು
ಶ್ರೀಗುರು ನಿನ್ನೊಳಗೊಳ್ಳುವ ರುದ್ರ
ಶ್ರೀಗುರು ನೀನಾಗುವ ಪರಬ್ರಹ್ಮ
ಶ್ರೀಗುರು ಪಾದಕೆ ವಂದಿಸು ನಿತ್ಯ
ಶ್ರೀಗುರು ಪಾದವ ಪೂಜಿಸು ಸತ್ಯ ೧೦೪

ಗುರುವಿನ ಉಪಕೃತಿ ಮರೆತರೆ ನೀನು
ಧರೆಯೊಳು ದುರ್ಗತಿಗಿಳಿಯುವೆ ನೀನು
ಗುರುವಿನ ಅನುಮತಿ ಪಡೆಯಲುನೀನು
ಸುರುಚಿರ ಸದ್ಗತಿ ಸೇರುವೆ ನೀನು ೧೦೮

ಗುರುವಿನ ಗೀತೆಯ ಹೇಳಿದೆನೊಲಿದು
ಕರುಣದ ಕಂದನೆ ಹಾಡೈ ನಲಿದು
ಮರೆಯದಲೀಗುರುಗೀತವ ಹಾಡು
ಶ್ರೀ ನಿಡುಮಾಮಿಡಿ ಪೀಠವ ನೋಡು

# ನಿಡುಮಾಮಿಡಿಯು ನೋಡಿ!

ಎಳೆ ಹಸುರಿನ ಇಳಿ ಬಿಸಿಲಿನ
ಚಲು ಸಂಜೆಯು ಮುಂದೆ
ಅಲೆಯುತ ಕೋಕಿಲ ಗಾನವ
ಕೇಳುತಲೈತಂದೆ ೧

ನಿಡುಮಾಮಿಡಿ ನಡುಬೈಲಿನ
ಷಡುಬೆಟ್ಟದ ಮೇಲೆ
ನಿಡುಗಾಲದ ಕೋಡ್ಗಲ್ಲಿನ
ಮೃಡಶಾಸನ ಲೀಲೆ ೨

ಕರಿಕಲ್ಲೊಳು ಮೆಯ್ವೆತ್ತಿದ
ಬೃಹದಕ್ಷರ ಶ್ರೇಣಿ
ಹೆರೆ ಹಿಂಗದೆ ಹಿರಿ ಹರುಷದೆ
ನಿಂದೋದಿತು ವಾಣಿ ೩

ಭಾನು ವರ್ಷದ ಮಾಘ ಮಾಸದಿ
ಕ್ರಿಯಾಶಕ್ತಿಯೊಡೆಯರು,
ಕಾಳ ವರ್ಷದ ಶ್ರವಣ ಮಾಸದಿ
ಚಂದ್ರಭೂಷಣ ಒಡೆಯರು; ೪

ಇದ್ದರಿಬ್ಬರು ಶುದ್ಧ ಹೃದಯರು
ಸಿದ್ಧಪುಂಗವರವರು
ರಾಜಗುರುಗಳು ರಾಜಶ್ರೀಗಿರಿ
ಸಿಂಹಾಸನಾಧೀಶರು. ೫

# ಅಂದು ಬಾಳು ಒಂದು ಹೋಳು!

ಪುಣ್ಯ ನಿಡುಮಾಮಿಡಿಯ
ಸ್ವರ್ಣಮುಖಿ ತೀರದಲಿ
ಕುಳಿತಾಗ ಸುಳಿದಾಗ
ಮೂಡಿದುದು ಹಾಡಿದುದು.

ಸಂಜೆ ಬಣ್ಣ
ಕವಿದು ಕಣ್ಣ
ನಿರುಕಿಸಿ ಮನ
ಒರೆದ ಕವನ! ೧

ಹೊಂಪು ಹೊನಲು
ತಂಪು ಮಳಲು
ದಡದೆ ಹಸುರು
ಬುಡದೆ ಕೆಸರು
ತಿಳಿಯ ನೀರು
ಬಿಳಿಯ ಬೇರು
ಏನು ಮಾಟ
ಏನು ನೋಟ! ೨

ದಡದ ಮೇಲೆ
ಗಿಡದ ಸಾಲು
ತಂಪು ನೆರಳು
ಕಂಪು ಅರಳು
ಸುರಿದ ಹೂವು
ಹರಿವ ಹಾವು
ಬಿಟ್ಟ ಹಣ್ಣ
ತೊಟ್ಟ ಬಣ್ಣ
ಏನು ಚಂದ
ಏನು ಗಂಧ
ಏನು ರುಚಿಯು
ಏನು ಶುಚಿಯು!! ೩

ಹಕ್ಕಿ ಹಿಂಡು
ಸಾಲುಗೊಂಡು
ಹಾರಿ ಬಂದು
ಸೇರಿ ನಿಂದು
ಹರಿದು ಕಾಯ್
ಸುರಿದು ಬಾಯ್
ಕೂಡಿ ಉಲಿದು
ಹಾಡಿ ನಲಿದು

## ಹೊಸ್ನು ಪಕ್ಕಿ

ಇಂಪು ಗೊದಲು
ಸೊಂಪು ಬರಲು
ಏನು ಸೊಗಸು
ಏನು ಬೆಸಸು !!! ೪

ಅದರ ಮೇಲೆ
ಇಣಿಕಿ ನೋಡಿ
ಬಾನ ಬಳ್ಳಿ
ಮೊಗ್ಗ ಅರಳಿ
ಏನು ಮೆರಗು
ಏನು ಬೆಡಗು
ಎಂಥ ತಳಕು
ಎಂಥ ಹೊಳಕು ! ೫

ಪೆರೆಯ ಕಿರಣ
ತೆರೆಯ ಚರಣ
ಹೊಂದಿ ಬಂದು
ಹಬ್ಬಿ ನಿಂದು
ಹರವಿ ಹರುಷ
ಹೋಯ್ತು ನಿಮಿಷ
ಸಂಜೆ ಹೊತ್ತು
ಬಂಜೆ ಬಿತ್ತು
ಎಂಥ ಪ್ರಕೃತಿ
ಎಂಥ ವಿಕೃತಿ !! ೬

ಮಬ್ಬು ಹೆಚ್ಚಿ
ಹುಬ್ಬು ಮುಚ್ಚಿ
ಹೊನಲೂ ಇಲ್ಲ
ಮಳಲೂ ಇಲ್ಲ
ತೋಪು ಇಲ್ಲ
ರೂಪು ಇಲ್ಲ
ಹಸುರು ಇಲ್ಲ
ಕೆಸರು ಇಲ್ಲ
ಹೂವು ಇಲ್ಲ
ಹಾವು ಇಲ್ಲ ! ೭

ಹಕ್ಕಿ ಇಲ್ಲ
ದಿಕ್ಕು ಇಲ್ಲ
ತಾರೆ ಇಲ್ಲ
ನೀರೆ ಇಲ್ಲ
ಪೆರೆಯೂ ಇಲ್ಲ
ತೆರೆಯೂ ಇಲ್ಲ
ನಾನು ಇಲ್ಲ
ನೀನು ಇಲ್ಲ !! ೮

ಅಂದು ಬದುಕು
ಒಂದು ತುಣುಕು
ಅಂದು ಬಾಳು
ಒಂದು ಹೋಳು.

# ತೆಂಗಿನ ಮರ

೧

ಹನ್ನೊಂದನೆ ಶತಮಾನದಲಿ ಶ್ರೀ ಜಗದ್ಗುರು
ಚಂದ್ರಗುಂಡಸ್ವಾಮಿ ಶಿವಾಚಾರ್ಯರು
ಶ್ರೀಶೈಲ ಸೂರ್ಯಸಿಂಹಾಸನದಿ ಮಂಡಿಸುತ
ಚಂದ್ರ ಕೀರ್ತಿಯಿಂ ತಾವ್ ಶೋಭಿಸಿದರು

೨

ಇತಿಹಾಸ ರಂಗದಲಿ ವಿಖ್ಯಾತನೆನಿಸಿರ್ದ
ತವನಿಧಿಯ ದೇವದಾಸಮಯ್ಯನಿಗೆ
ಯತಿರಾಜ ಚಂದ್ರಗುಂಡಸ್ವಾಮಿಯು ದೀಕ್ಷೆಯನು
ಕರುಣದಿಂ ಕೊಟ್ಟು ಮೆರೆದರಿಳೆಯೊಳಗೆ

೩

ಪ್ರಖ್ಯಾತ ಶ್ರೀ ಚಂದ್ರಗುಂಡ ದೇಶಿಕೇಂದ್ರರು
ದಕ್ಷಿಣದ ದೇಶವನು ಸುತ್ತುವರು
ಸೌಖ್ಯವನು ತೊರೆದು ಜನಸಖ್ಯದಲಿ ನೆರೆಬೆರೆದು
ಮೋಕ್ಷವನು ಬೋಧಿಸುತ ಸುಳಿಯುತಿಹರು.

೪

ಬ್ರಹ್ಮಚರ್ಯದ ತೇಜ ಸೂರ್ಯಪೀಠದ ರಾಜ-
ಶ್ರೀವಿಯವರಾನನದಿ ರಾಜಿಸಿಹುದು
ಧರ್ಮರಾಜ್ಯದ ಬಯಕೆ ಕ್ಷೇಮ ಸಂಪದ ಗಳಿಕೆ
ಕಾರ್ಯಕಾರಣದಿ ತೋರುತಿಹುದು.

ಹೊನ್ನ ಹಕ್ಕಿ

೫

ಚೋಳಮಂಡಲ ದೇಶವೆಂದೆನುತ ಹೆಸರಾಂತ
ಗೂಳೂರು ನಗರ ಬಳಿಗಾಗಮಿಪರು
ಚೋಳವನದೊಳಗಿರುವ ತೆಂಗಿನ ಮರದ ಕೆಳಗೆ
ಸಿದ್ಧಾಸನದಿ ಕುಳಿತು ಪೂಜಿಪರು.

೬

ಏನು ಮನಸಿನ ಧ್ಯೇಯು, ಏನು ಸಂಸ್ಕೃತಿ ಧ್ಯೇಯ
ಏನು ನಿಶ್ಚಲ ಭಾವ, ಎಂಥ ಪೂಜೆ !
ಏನು ಲಿಂಗದ ನೋಟ, ಏನು ಲಿಂಗದ ಕೂಟ
ಯಾವ ಪುಣ್ಯದ ಶುದ್ಧಿ ಏನು ಸಿದ್ಧಿ !

೭

ಅನಿತರೊಳು ತಿಳಿದೆದ್ದು ಕಪ್ಪುರಾರತಿ ಹಚ್ಚಿ
ಮಂಗಳಾರತಿ ಹೇಳಿ ಮುಗಿಸುವರು
ನೈವೇದ್ಯವರ್ಪಿಸಲು ಬಳಿಯಲ್ಲಿ ಏನೇನು
ಇಲ್ಲದಿರೆ ಮೇಲಕ್ಕೆ ನಿರುಕಿಸುವರು.

೮

ಅವರ ಆ ಸದ್ಭಾವವರಿದು ತೆಂಗಿನ ಮರವು
ತಾನಾಗಿ ಬಾಗಿ ಫಲವೀಯುವುದು.
ಅವರ ತಪಸಿನ ಫಲವು ಏನಿದುವೆ ಸೋಜಿಗವು
ಏನು ಮಹಿತಾತ್ಮರಿವರೆಂದೆನುವರು.

೯

ಅಲ್ಲಿರುವ ತೋಟಿಗರು ನಿಲ್ಲದಲೆ ಓಡುವರು
ಚೋಳನಿಗೆ ಹೇಳುವರು ಕಂಡುದನು
ಬ್ರಹ್ಮಹತ್ಯದಿ ಬಳಲುತಿಹ ಭೂಪ ಕೇಳಿದಡೆ
ಸಂತಸದಿ ಸನ್ನಿಧಿಗೆ ಸಾರುವನು.

೧೦

ತನ್ನ ಕೊರತೆಯ ಬಿನ್ನವಿಸಿ ಪ್ರಾರ್ಥಿಸುವನು. ಮಿಗೆ
ಕಮಂಡಲ ಜಲದಿಂದ ಚೋಳರಸನ
ಬನ್ನವನು ಪರಿಹರಿಸಿ ಮುನ್ನ ಶಿವದೀಕ್ಷೆಯನು
ಕೊಟ್ಟರೆಂಬುದನು ಹೇಳಲಳವೇನು ?

೧೧

ಮರವು ಬಾಗಿತು ಚೋಳರಸನ ರೋಗ ಹರಿಯಿತು
ಜನದ ಮನದೊಳು ಸಂತಸ ವುಕ್ಕಿತು
ವರ ಪೀಠವುದಯಿಸಿತು ಶ್ರೀಶೈಲ ಹೆಸರಾಂತು
ವರಧರ್ಮದೊಸಗೆ ನಾಡೊಳು ಮೊಳಗಿತು.

೧೨

ಧರ್ಮಾರ್ಥದಿಂ ಕಟ್ಟಿಸಿತ್ತ ಗುಯಲೂರ್ ಮಠದ
ಸ್ತಂಬದೊಳು ಚೋಳರಸ ಕೆತ್ತಿಸಿರುವ
ತೆಂಗಿನಮರದ–ಮೋಣ್ ಚಂದ್ರಗುಂಡರ ಚಿತ್ರ
ಇಂದಿಗೂ ಉಸುರುವದೀ ಚರಿತ್ರವ.

# ಜಯ ಗೀತ

ಜಯ ಚಂದ್ರಗುಂಡಸ್ವಾಮಿ ಜಯ ಭಕ್ತಜನ ಪ್ರೇಮಿ
ಜಯ ಶ್ರೀ ಶಿವಾಚಾರ್ಯ ಜಯ ಯೋಗಿವರ್ಯ
ಜಯ ಶುದ್ಧ ಚಾರಿತ್ರ ಜಯ ಸಿದ್ಧ ಹೃನ್ಮಿತ್ರ
ಜಯ ಲೋಕ ಸಂಪೂಜ್ಯ ಜಯ ಮುಕ್ತಿರಾಜ್ಯ

ಜಯ ಜಯತು ಧವಳಕೀರ್ತಿ ಜಯ ಜಯತು ವಿಮಳಮೂರ್ತಿ
ಜಯ ಜಯತು ಸೂರ್ಯಸಿಂಹಾಸನದ ಗುರು ಮೂರ್ತಿ
ಜಯದೇವ ದಾಸಮಾರ್ಯನ ಕಾರುಣ್ಯದ ಮೂರ್ತಿ
ಜಯ ನಾರಿಕೇಳ್ ವೃಕ್ಷವ ಬಾಗಿಸಿದ ಕೀರ್ತಿ

ರಾಚೋಟಿ ಶ್ರೀ ವೀರಭದ್ರ ಸ್ಥಾಪನ ಕರ್ತ
ಜಯ ಜಯತು ಜಗದ್ಗುರು ಭುವನ ಪಾಲನ ಭರ್ತ
ಜಯ ಜಯತು ದೀನ ಜನ ದುಷ್ಕರ್ಮ ಸಂಹರ್ತ
ಜಯ ಜಯತು ಶರಣ ಜನ ಸಂರಕ್ಷಣ ಕೃತಾರ್ಥ.

# ಏಳಿರಿ

ಗುರುವಿನ ಗೆಲವು ನಾಟಕದಲ್ಲಿ ರೈತರನ್ನು ಯುದ್ಧಕ್ಕೆ ಪ್ರೋತ್ಸಾಹಿಸಿದ
ಐತಿಹಾಸಿಕ ಘಟನೆಯ ಚಿತ್ರ)

ರೈತರೆ ನೀವ್ಯೆ ನಿಜಕಲಿಗಳ್
ಕ್ಷಾತ್ರವ ತಾಳಿರಿ ನೀವೀಗಳ್

ಕಾಳಗವಾಡಲು ಕೈದುವದೇಂ
ಕಲಿತನವೊಂದದು ಸಾಲದುದೇಂ ೧

ತೋರುವ ತನುವಿದೆ ತೇರಹುದು
ಎಳೆಯಲು ಕರಣಗಳಶ್ವಗಳು ೨

ಊಳುವ ನೇಗಿಲೆ ಕೈದುವದು
ಕಲಿತನವೆರಸಲು ಕೂರಹುದು ೩

ಜೊತೆಗಭಿಮಾನವು ಹೊಮ್ಮಲದು
ವಿಜಯವು ಸಾರ್ವುದೆ ಸಾಜವದು ೪

ನಿಮ್ಮಿಂದರಸನ ಪ್ರಾಣಗಳು
ನಿಮ್ಮಿಂದೀ ಜಗ ತ್ರಾಣಗಳು ೫

ಭಾರತ ಪುತ್ರರು ನೀವಲ್ತೆ
ಭಾವೀರಾಜ್ಯವು ನಿಮಗಲ್ತೆ ೬

ಹಿಂದಡಿಯಿಡುವುದ ತೊರೆಯಿರಿ ನೀವ್
ಮುಂದಡಿಯಿಡೆ ಹುರುದುಂಬಿರಿ ನೀವ್ ೭

ಏಳಿರಿ ಏಳಿರಿ ಕಾಳಗಕೆ
ತನ್ನಿರಿ ಜಸವಂ ಮೂಜಗಕೆ ೮

# ಗುರುವೆ

ಶ್ರೀ ಕರಿಬಸವೇಂದ್ರ ಜಗದ್ಗುರುವೇ
ಆಕಾಂಕ್ಷಿಪರಿಗೆ ಕಲ್ಪದ ತರುವೇ
ಲೌಕಿಕ ಕಷ್ಟನಿವಾರಕ ಗುರುವೇ
ಲೋಕಕೆ ಪಾವನ ಕರ್ತೃವೆ ಗುರುವೆ ೧

ಶ್ರೀ ನಿಡುಮಾಮಿಡಿ ಕರಿಬಸವೇಂದ್ರ
ನಾನೆಂಬುವ ಕಾಳಿರುಳಿಗೆ ಚಂದ್ರ
ಜ್ಞಾನಪ್ರಭಾಕರ ಶಾಂತಿಯಕೇಂದ್ರ;
ದೀನದಯಾನಿಧೆ ಸದ್ಗುಣಸಾಂದ್ರ ೨

ಒಣಗಿದ ಮಾವಿನ ಮರವನು ಫಲಿಸಿ
ಅಚ್ಯುತ ಭೂಪತಿಗಾಶೀರ್ವದಿಸಿ
ಶ್ರೀ ಘನಗಿರಿ, ರವಿಪೀಠವಗಳಿಸಿ
ಜಗದೊಳು ಲೀಲೆಯ ಮೆರೆದಿಹ ಗುರುವೇ ೩

ನಿನ್ನಯ ಜಸಕೇಳದ ಕಿವಿಯೇಕೆ
ನಿನ್ನಯ ಪಾಡದ ನಾಲಗೆಯೇಕೆ
ನಿನ್ನಯ ಸೇವಿಸದಂಗವದೇಕೆ
ನಿನ್ನಯ ನೆನೆಯುದ ಚಿತ್ತವದೇಕೆ ? ೪

ನಿನ್ನಯ ಕೀರ್ತಿಯ ಪಾಡುವೆ ಗುರುವೇ
ನಿನ್ನಯ ಪಾದಕೆ ನಮಿಸವೆ ಗುರುವೇ
ನಿನ್ನಯ ನಾಮವ ನೆನೆಯುವೆ ಗುರುವೇ
ನಿನ್ನಯುನಾವಗಂ ಹರಿಸುವೆ ಗರುವೇ ೫

ಬಂದಿಹ ತೊಡಕನು ತೊಲಗಿಸು ಗುರುವೇ
ನೊಂದಿಹ ಬಾಳನು ಬೆಳಗಿಸು ಗುರುವೇ
ಕಂದದ ಹೂವನು ಧರಿಸುವೆ ಗುರುವೇ
ನಂದದ ಆರತಿ ಬೆಳಗುವೆ ಗುರುವೇ ೬

" ಕನ್ನಡ ಮಕ್ಕಳಿದನಕ್ಕರಿಂ ಪೇಳಲ್ಕೆ
ಜಾಣ್ನುಡಿಯು ಜೋಡಹುದು,
ಮಂಗಳವು ಮೂಡುವುದು"

# ಹರಿಹರ

ಓ ಹರಿಹರ ದೇವ! ನೀನೆನ್ನೆದೆಯ ಎಳೆದಂತೆ
ಬೇರಾರು ಎಳೆದಿಲ್ಲ ಬಾಯ್ನೀರು ಕರೆಸಿಲ್ಲ
ಬಗೆಯು ಮಾರ್ಪಡಿಸಿಲ್ಲ ಮಿಗೆ ಸೊಗವ ಬೀರಿಲ್ಲ

ರಗಳೆಯಲಿ ಚಿತ್ರಿಸಿದ ರಮ್ಯ ನುಡಿಯನು ನೋಡಿ
ಸೊಗಸಿನಲಿ ಹಾಡಿ ಭಾವದಲಿ ತಾನೊಡಮೂಡಿ

ಸುಕುಮಾರಶೈಲಿಯೊಳ್ ಮನವಕ್ಕರಿಂ ಕರಗಿ
ಸಕಲಸದ್ಭಾವದೊಳ್ ಸಾತ್ವಿಕರಸಂ ಮಸಗಿ

"ಪಾಲ್ದೊರೆಗೆ ಕೆಸರು ಬೆಲ್ಲವು, ಸಕ್ಕರೆಯೆ ಮಳಲು
ತವರಾಜ ನೆರೆ ತೊರೆಯು ಬೆರೆದಂತೆ ಇರುತಿರಲು

ಬೇರೆ ಕಾವ್ಯವನೋದಿ ಸೊಗಸುಗೊಳ್ಳುವ ಚಿಂತೆ
ಬೇರೆ ಬಾವಿಯ ತೋಡಿ ಉಪ್ಪುನೀರುಂಬಂತೆ"

ನಿನ್ನ ರಗಳೆಯ ಕಾವ್ಯ ಕಾವೇರಿ ಹಿರಹೊನಲು
ಚನ್ನಕನ್ನಡಿಗರಲಿ ಈಗ ಹರಿದಿದೆ ಮಿಗಿಲು

ಹರಿಹರನೆ ಕವಿವರನೆ! ನಿನಗೊಮ್ಮೆ ಬಾಗುವೆನು
ಪರಿಹರಿಸು ಕನ್ನಡದ ದೀನ ದೌರ್ಭಾಗ್ಯವನು

ನಿನ್ನ ಭಕುತಿಯೊಳಿಂತು ಪೆಳ್ದಿನ್ನೈ ಎಲೆ ಚನ್ನ
ಇನ್ನಿತರ ಪಂಡಿತರು ಹೇಗಾದರೆನಲೆನ್ನ.

# ಬಸವರಾಜಗೆ

ವೇದಗಳ ಕನ್ನಡಿಸಿ ಅನುಭವದ ತಿರುಳಿಳಿಸಿ
ಜಗದೊಳಗೆ ಜಸವಾಂತ ಹೇ ಬಸವ ರಾಜೇಂದ್ರ !
ನಿನ್ನ ವಚನ ರಚನೆಯು ಪೊಸಕಲೆಯು, ಮೆರೆವಸಿರಿ-
ಗನ್ನಡದ ಸಾರ ಸಂಸ್ಕೃತಿಯು, ತತ್ವದ ಖಣಿಯು,
ನೀತಿಬೋಧೆಯ ಸುಧೆಯು, ಜೀವಕರುಣೆಯ ಝರಿಯು,
ಜಾತಿಸೂತಕವನಳಿಸಿ ಜನ ಬಲವೀವ ನಿಧಿಯು.

ಅಲ್ಲದಿರೆ ನವಯುಗದ ಸರಸ ಸಾಹಿತಿಗಳಿಂ
ಸಲ್ಲಲಿತ ಕನ್ನಡದ 'ಉಪನಿಷತ್ತ'ದೆಂಬುವ
ಮೇಲ್ತರದ ಘನತೆ ಗೌರವಮಂ ಪಡೆಯುತಿತ್ತೆ ?
ಸುಳ್ಳಲ್ಲ ಸತ್ಯಮಿದು ನವಶಕ್ತಿಯುತವಾದ
ಭವದೀಯ ಲೇಖನಿಯು ಜೊಳ್ಳು ಮಾರ್ಗವ ಬಿಟ್ಟು
ಭುವನದೊಳೊಳ್ಳೆ ಮಾರ್ಗಕೆ-ಪುಟಕೊಟ್ಟಿಹುದು.

ನಿನ್ನಂ ಪಡೆದಿಹ ಕನ್ನಡದ ಭಾಗ್ಯಕೆಣೆಯುಂಟೆ ?
ನಿನ್ನಂ ಪಾಡುವ ಭಕ್ತನಿಗೆ ಬೇರೆ ಸುಧೆಯುಂಟೆ ?
ಮುನ್ನ ಮಾಡಿದ ಸುಕೃತಿಯಿಂ ಕನ್ನಡದಿ ಜನಿಸಿ
ನಿನ್ನ ವಚನಾಮೃತವ ಸವಿದ ನಾವೇಧನ್ಯರಲ್ತೇ !

# ಬಸವ ಕ್ರಾಂತಿ !

ಬಸವ ಕ್ರಾಂತಿ ಸಾಧಿಸುವ ಬೋಧಿಸುವ ನಾಡಿಗೆ
ಬಸವ ಭಾನು ಕಾಂತಿಯನ್ನು ಬೆಳಗುವ ಕರುನಾಡಿಗೆ

ವಿಶ್ವ ಸ್ವಾರ್ಥವಳಿಯುವಂತೆ ಶಾಂತಿ ಸಮತೆ ಬೀರುವ
ವಿಶ್ವೈಕ್ಯದ ಭಾವಬೆಳೆದು ಬರುವ ದಾರಿ ತೋರುವ

ಆಯುದ ನಡೆ ನುಡಿಯೈಕ್ಯವು ಸತ್ಯ ನಿಷ್ಠ ನುಡಿಗಳ
ಕಾಯಕಾದಿ ಪರತರ ಶುದ್ಧ ಸರಳ ನಡೆಗಳ
ಹೆಣ್ಣುಮುಕ್ಕಳಾತ್ಮಗತಿಯ ಸ್ವಾತಂತ್ರ್ಯವ ಗಳಿಸುವ
ಹೆಚ್ಚು-ಕಡಿಮೆ ಜಾತಿ-ವರ್ಣವೆಂಬ ಭೇದವಳಿಯುವ

ಅನುಭವ ಸ್ವಾದವನು ವಚನರಚನೆಯಿಂದ ತೋರಿಸಿ
ಹಿತವನುಣಿಸಿ ಜಗದ ಜನರ ಹೃದಯಗಳನು ತೋಷಿಸಿ
ನಾಕ ನರಕ ಸತ್ಯ ಮಿಥ್ಯದ ರೂಪವೆಂದು ಸಾರಿದ
ಕನ್ನಡ ರಾಜ್ಯದಲಿ ವೀರ ವೃಷಭ ಧ್ವಜವ ಮೆರಸಿದ
ಕನಕ ಸೂರ್ಯ ನಿಡುಮಾಮಿಡಿ ಪೀಠಾಧಿಪ ವಿರಚಿತ
ಇದುವೇ ನವಕ್ರಾಂತಿ ಲೋಕ ಶಾಂತಿ-ಸಕಲ ಸುವಿದಿತ.

# ಬಸವೇಶ್ವರ ವಚನ

ಬಸವನ ವಚನವ ಓದಿದರೆಂದರೆ
　　ಬುದ್ಧಿಯ ಮೌಢ್ಯವು ದೂರಹುದು
　　ಮನದೊಳು ಪ್ರೀತಿಯು ಕುಣಿಯುವುದು ಹೃದಯದಿ
ಕರುಣೆಯು ನಲಿನಲಿದಾಡುವುದು

ಭಾಷಾಸಾಗರದೊಡಲೊಳ್ಮುಳುಗುತ
　　ಸಗ್ಗದ ಸುಖವನು ಸವಿಯುವರು
　　ಮೋಣದರರ್ಥದ ಮರ್ಮವನರಿಯುತ್ತ
ಜನಗಳ ವ್ರೈ ನೆವಿರೇಳುವದು

ಕನ್ನಡ ಭಾಷೆಯ ಸೊಬಗನು ಕಾಣ್ಬರು
　　ಜೀವದ ಗುಟ್ಟನು ಗುರ್ತಿಪರು
　　ಹೃದಯದಿ ನೇಹದ ಬೀಜವ ಬಿತ್ತುತ್ತ
ವೈರದ ವೃಕ್ಷವ ಮುರಿಯುವರು

ವಚನದೊಳಿರ್ಪುದು ಬಸವನ ಹೃದಯವು—
　　ಅಲ್ಲಿಯೆ ಆತನುದಯವು ಮೋಣ್
　　ವಚನದೊಳಡಗಿಹುದನುಭವ ಸೌಖ್ಯವು
ಅಲ್ಲಿಯೆ ಮುಕುತಿಯು ಫಲವಿಹುದು.

# ಭಕ್ತಿ ಭಾಂಡಾರಿ ಬಸವಣ್ಣ

(ಉಪಯುದ ಆಲೆನುಡಿ)

ಭಕ್ತಿಯ ಭಾಂಡಾರಿಯೆ ಬಸವಣ್ಣ
ಶಕ್ತಿಯ ಕೊಡು ನೀ ಜಗದಣ್ಣ

ನಿನ್ನಯ ವಚನದ ಸುಧೆಯನು ಚೆಲ್ಲಿ
ಬನ್ನವ ಬಡುವೆವು ನಡೆನುಡಿಯಲ್ಲಿ ೧

ಕನ್ನಡ ದೇಶಾಭಿಮಾನವ ತೊರೆದು
ಅನ್ಯರ ಬಲಿಯೊಳು ಬಿದ್ದೆವು ಮರೆದು ೨

ಕಡುತರ ಕಾಯಕ ತತ್ವವ ಹುಸಿದು
ಬಡತನ ಬಾಳೊಳು ಬೆಂದೆವು ಹಸಿದು ೩

ಉದ್ಯಮ ವಳಿಸಿತು ಯಾಂತ್ರಿಕ ಯುಗವು
ಬುದ್ಧಿಯ ಭ್ರಮಿಸಿತು ತಾಂತ್ರಿಕ ಜಗವು ೪

ತನುವನು ದಂಡಿಸಿ ದುಡಿಯದೆ ಜನರು
ಮನೆ ಮನೆ ತಿರಿದುಣ್ಣಲು ತೊಡಗಿದರು ೫

ಸಿರಿ ಸುಖಗಳ ತಾನಳಿಸಿತು ದಾಸ್ಯ
ತಿರೆಯೊಳು ಜರುಗಿತು ಪರಿ ಪರಿ ಹಾಸ್ಯ ೬

ನಿನ್ನಯ ನಾಮವ ನೆನೆಯಿಸು ಮನದೋಳ್
ನಿನ್ನಯ ವಚನವ ಹೇಳಿಸು ಮುಖದೋಳ್ ೭

# ಹೊನ್ನ ಹಕ್ಕಿ

ಒಪ್ಪುವ ಕಾಯಕ ನಡೆಯಿಸು ಜನರೋಳ್
ಒಪ್ಪುದು ಸುಖ ಸ್ವಾತಂತ್ರ್ಯವು ಜಗದೋಳ್ ೮

ಹರಿಯಲು ಬಂಧವ ತರಿಯಲು ಭವವ
ಪೊರೆಯಲು ಸಕಲರ ಬಾಳ್ವೆ ಬಸವ ೯

ಶ್ರೀ ನಿಡುಮಾಮಿಡಿ ಶ್ರೀಗಿರಿ ಪೀಠ
ಕನ್ನಡ ಗಡಿಯೊಳು ಚಲುವಿನ ತೋಟ ೧೦

## ಮಾದೇವಿಗೆ

ವಿಜಯಿಯಾಗಲಿ ನಮ್ಮ ಶರಣೆ ಶ್ರೀ ಮಹದೇವಿ
ಸುಜನ ಸಂಕುಳಭಾವಿ ಸಾರ ಸದ್ಗುಣ ಜೀವಿ

ಕವಿಗಳೊಲಿಯುವ ತೆರದಿ ಕವನ ಕಟ್ಟಿದ ಮಾತೆ
ಭುವನ ಜನಗಳ ಮನವ ಸೂರೆಗೊಂಡಿಹ ಮಾತೆ
ಅವನಿಪತಿ ಕೌಸಿಕನ ಭೋಗಕೆಳಸದ ಖ್ಯಾತೆ
ಜವನ ಬಾಯಲಿ ಮಣ್ಣನೆರಚಿ ಬಾಳಿದ ನೂತೆ ೧

ವೇದ ಶಾಸ್ತ್ರದ ಬಣಗು ನುಡಿಯ ಮೆಚ್ಚದ ತರುಣೆ
ವಾದವಿಲ್ಲದ ಪರಮ ಬೋಧೆಗೈದಿದ ಶರಣೆ
ಸ್ವಾದದಿಂದೊಡೆವೆರೆದ ವಚನ ರಚಿಸಿದ ಕರುಣೆ
ಸಾದರದಿ ನೀರೆಯರ ಪೊರೆದ ಪಾವನ ಚರಣೆ ೨

ವಿರತಿ ಬಾವುಟ ಎತ್ತಿ ಧರೆಯ ಸುತ್ತಿದ ತಾಯೆ
ಶರಣವೃಂದವ ಸೇರಿ ಚಕಿತಗೊಳಿಸಿದ ತಾಯೆ
ಕೊರತೆಯಿಲ್ಲದ ಸತ್ಯಸುಖವ ಪಡೆದಿಹ ತಾಯೆ
ಶರಣು ಬಂದೆವು ನಿನ್ನನೊಲಿದು ಸೊಗವೆಮಗೀಯೆ ೩

ಅಬಲೆ ಜನಗಳ ಮನದಿ ಸ್ಥೈರ್ಯ ತುಂಬಿದ ವೀರೆ
ಸಬಲ ಪುರುಷರ ಎದೆಯ ಎರಡು ಮಾಡಿದ ಶೂರೆ
ಅಬಲ ಜನರೆದೆಗೊಳವ ತೊಳಗಿ ಬೆಳಗಿದ ತಾರೆ
ಅಭಯವಿತ್ತೆಮ್ಮ ಪೊರೆಯಲ್ಬೇಗ ಮೊಗದೋರೆ ೪

ವಸುಧೆಯೊಳು ಶೋಭಿಸುವ ಚಲುವ ಕನ್ನಡ ಚನ್ನೆ
ಕುಶಲರಹುದೆಂದೊರೆವ ಸರ್ವಗುಣ ಸಂಪನ್ನೆ
ಬಸವನಲ್ಲಮ ಚನ್ನಬಸವರೊಲುಮೆಯ ಕನ್ನೆ
ಎಸೆವ ಶ್ರೀಗಿರಿ ಮಲ್ಲಿಕಾರ್ಜುನನ ಮನದನ್ನೆ ೫

# ಅಕ್ಕನ ಹಾಡು

(ಅಕ್ಕನ ಬಳಗಕ್ಕಾಗಿ ಬರೆದು ಕೊಟ್ಟದ್ದು)

ಮಾತಾಯಿ ಮಾದೇವಿ ನಿನ್ನ ಪ್ರೇರಣೆಯಿಂದ
ನಿನ್ನ ಪೆಸರಿನ ಬಳಗ ಜನಿಸಿರ್ದುದೌ
ಭೂತಲದಿ ಬಹುವಿಧದಿ ಬೆಳೆದು ಬಾಳುವ ತೆರದಿ
ನಮ್ಮೊಳಗೆ ಶಕ್ತಿಯನು ನೀ ಕರುಣಿಸೌ ೧

ಭೋಗಕೆಳಸದ ಮಾತೆ ತ್ಯಾಗ ಗುಣದೊಳು ಪ್ರೀತೆ
ವಚನ ವಾಙ್ಮಯದಲ್ಲಿ ವಿಖ್ಯಾತೆ ನೀ
ಯೋಗಾಂಗ ತ್ರಿವಿಧಿಯನು ರಚಿಸಿರ್ದ ಯೋಗಿಣಿಯೆ
ಕಾಪಾಡು ಕನ್ನಡವ ಪೊರೆದ ಜನನೀ ೨

ಇದೊ ನೋಡು ನಿನ್ನ ಹೆಸರಿನ ಬಳಗ ! ಕೇಳ್ ಪೆಸರು
ಅಕ್ಕ ಮಾದೇವಿ ಸೇವಾ ಸಮಾಜ
ಒದಗಲೆಂದಿಗು ವಿಜಯ, ಎನುತ ಕೊಡು ನೀನಭಯ
ನಾವೆಸಗುವೀ ಕೃತಿಗೆ ಬಹುತೇಜ ೩

ಹೇ ಅಕ್ಕ ಮಾದೇವಿ ಶರಣೆಯರ ಹೃದ್ಭಾವಿ
ಕರ್ಣಾಟ ಭಾಷಾ ಪುನರುಜ್ಜೀವಿ
ನೀನಕ್ಕರಿಂದೆಮ್ಮನಾವಗಂ ಕಾಪಿಡೌ
ನಿನ್ನ ನಾವ್ ಹರಸುವೆವು ಸತತ ದೇವಿ ೪

ಹೃತಮಾಯ ಜಿತಕಾಯ ಅಲ್ಲಮಪ್ರಭುರಾಯ
ಸಂತತದಿ ಶರಣಜನ ಸದಯ ಹೃದಯ
ನುತಿಸುವೆವು ನೇಹದಲಿ ನಮಿಸುವೆವು ಪಾದದಲಿ
ನಮ್ಮ ಬಳಗವ ಸಲಹು ಸುಗುಣ ನಿಲಯ ೫

## ಶ್ರೀಯವರಿಗೆ *

ಓ ಎನ್ನ ಚನ್ನ ಕನ್ನಡದ ಮಂಜುಳ ಕಂಠ
ಬಾ ಎನ್ನ ಮಾಧುರ್ಯಮಯ ನಾಮ ಶ್ರೀಕಂಠ

ನೀನೆತ್ತಿ ಪಿಡಿದಿರ್ದ ಕನ್ನಡದ ಬಾವುಟಾ
ತಾನೀಗ ತಬ್ಬಿಹುದು ಪಾರುತಂ ದಿಕ್ತಟಾ

ನಿನ್ನಮರವಾಣಿಯಿಂ ಹೊರಟ ಕನ್ನಡ ನುಡಿಯು
ಮುನ್ನಿನಾ ಕರ್ನಾಟದೇಳ್ಗೆಯ ಚಿಗುರ್ಗುಡಿಯು

ಸಂದಿದಾ ನಿನ್ನ ಕರ್ನಾಟಾಂಬೆಯೊಳಿಗಂ
ತಂದುದೈ "ರಾಜ ಸೇವಾಸಕ್ತ" ನೆಂಬುದಂ

ನಿನ್ನ ಬೆಳ್ಜಸದ ಬೆಳಗು ಬೆಳಗಲಿ ಮಿಗಿಲಾಗಿ
ನಿನ್ನ ಕನ್ನಡದ ಮುನ್ನಡೆಗೆ ಮುಂಬೆಳಗಾಗಿ

---

* ಬೆಂಗಳೂರು ವೀರಶೈವ ಸಮಾಜ ಸೇವಾ ಸಂಘದವರು ಏರ್ಪಡಿಸಿದ ೧೯೩೮ ನೇ ಸಾಲಿನ ಶ್ರೀಯವರ ಅಭಿನಂದನ ಸಭೆಯಲ್ಲಿ ಓದಿದ ಕವನವಿದು.

# ಕುಮಾರ ಯೋಗಿ !

ಬಾಲ್ಯದೊಳು ಬಡತನದ ಬಾಳುರಿಯ ಲೆಕ್ಕಿಸದೆ
ಬಾಲ್ಯದಲಿ ಪರರಾಶ್ರಯದಿ ವಿದ್ಯೆಯನು ಕಲಿತು,
ಕನ್ನಡದೆ ಕಡುಜಾಣನಾದ ಹೇ ಸುಕುಮಾರ
ನಿನ್ನ ಬಾಲರ ಬಿಟ್ಟು ಪೋದೆಯೋ ಬುಧವೀರ !

ಸುಖದುಃಖಗಳ ನೋಡದಲೆ ಹಸಿವುತೃಷೆಗಳ-
ನರಿಯದಲೆ ಮಾನಾಪಮಾನಗಳ ಗಣಿಸದಲೆ
ಸಮಾಜದ ಸರ್ವಾಂಗ ಏಳ್ಗೆಯನು ಮಾಡೀಗ
ಸಮಾಜವ ಮರದೆಯಾ ಸಮಾಜಾಭಿಮಾನಿಯೇ !

ಯೋಗಿಗಳ ಸಲುವಾಗಿ ಭೋಗವನು ಬಯಸದಲೆ
ತ್ಯಾಗಿಗಳ ಸಂಗದಲಿ ಯೋಗವನು ಸಂಗ್ರಹಿಸಿ
ಶಿವಯೋಗ ಮಂದಿರವ ಸ್ಥಾಪಿಸಿದ ಯೋಗಿವರ
ಶಿವಯೋಗ ಮಂದಿರವು ನಿನ್ನಿಂದ ದೂರಾಯ್ತೆ ?

ಸಂಸ್ಕೃತಿಯ ಏಳಿಗೆಗೆ ಹಗಲಿರುಳು ಯೋಚಿಸುತ
ಸಂಸ್ಕಾರ ಸತ್ಕಾರಗಳು ಸಮಾಜಕೊದಗಲೆಂದು
ಶ್ರೀ ವೀರಶೈವ ಮಹಾಸಭೆಯ ನಿರ್ಮಿಸಿದೆ
ಭಾವುಕನೆ ಬಂಧುರನೆ ತೋರೀಗ ನೀನೆಲ್ಲಿ ?

ನೀನೆಸಗಿದೊಸಗೆಗಳ ನೀನಿರಿಸಿದೊರತೆಗಳ
ನಾನೆಣಿಸಲಾರೆನೈ ನಾನಿರಿಸಲಾರೆನೈ
ನಿನ್ನೊಲುಮೆ ನಿನ್ನಲುಮೆಗಳನೆನಗೆ ಕರುಣಿಸಲು
ಕರುಳಲರನೀವೆನೈ ನಿನ್ನಡಿಯ ತಳಿರದಲಿ.

# ಕುಮಾರ ಚಂದ್ರ

ಅರಳಿದಷ್ಟಾವರಣ ಹೃದಯ ಮಂಚದ ಮೇಲೆ
ಮಂಡಿಸಿದ ಋಜುಕಾಯ ಕೃತಮಾಯ ಶಿವಯೋಗಿ
ಶ್ರೀ ಕುಮಾರೇಶ ನೀನೆಸಗಿದ ಕ್ರಿಯಾಶಕ್ತಿ
ನಿರ್ಜೀವ ಸಮಾಜವ ಬದುಕಿಸಿದ ಮಾ ಶಕ್ತಿ.

ವೀರಶೈವ ಮಾಸಭೆ – ಶಿವಯೋಗಮಂದಿರದ
ಸ್ಥಾಪನೆಯು, ಪರಳಿಯಲಿಗಳಿಸಿದ ಜಯ ಶ್ರೀಯು
ನಿನ್ನಮರ ಕೀರ್ತಿಯನು ನಿಡುಗಾಲ ಸಾರುತಲಿ
ತ್ರಿವರ್ಣ ಧ್ವಜವು ಬಾನೆತ್ತರದಿ ಹಾರುತಿದೆ.

ವಿದ್ಯೆ ಯೋಗಗಳನು ಪ್ರಚಾರ ಪಡಿಸಿದೆ ನೀನು
ಗ್ರಂಥ ರಾಶಿಗಳನ್ನು ಕೂಡ ಹಾಕಿದೆ ನೀನು
ನೀತಿ ಧರ್ಮಗಳೆಲ್ಲರಿಗೆ ಬೋಧಿಸಿದೆ ನೀನು
ಶುದ್ಧ ಕಾಯಕ ತ್ಯಾಗಗಳನು ಕಲಿಸಿದೆ ನೀನು.

ಹಣದ ಹಂಬಲವಿಲ್ಲ ನೆಣದ ಜಂಬವದಿಲ್ಲ
ಗುಣಕ್ಕೆ ಮತ್ಸರವಿಲ್ಲ ಶೀಲಕ್ಕೆ ಮಿತಿಯಿಲ್ಲ
ಆಂದೋಲಿಕೋತ್ಸವಕೆ ಎಂದಿಗೂ ಇಂಬಿಲ್ಲ
ಸನ್ಮಾರ್ಗ ಸಂಜೀವಿ ಸುಕುಮಾರ ನಿನ್ನಲ್ಲಿ

ಹಸಿವು ತೃಷೆಗಳ ಜಯಿಸಿ ವ್ಯಸನ ವೈರಿಯಲಯಿಸಿ
ಜನಕೆ ಹಿತವನು ಬಯಸಿ ನಿಯಮಗಳನಾಚರಿಸಿ
ಶ್ರೀ ವಿರತ ಉಡುರಾಜ ನೀನಾದೆ ನಿನಗಿಂತ
ಬೇರಾರು ಭಾಗ್ಯರೈ ಮರಳಿ ಬಾ ಹಿತವಂತ

ನಾಡ ಬಯಸುತಿಪ್ಪುದು ನಿನ್ನಮೃತ ಶಾಂತಿಯನು
ನೋಡ ತೋರುತಿಪ್ಪುದು ನಿನ್ನಮಳ ಕಾಂತಿಯನು.

# ಅಮರ ವಾಣಿ

ಬಂದಿಹನು ಸುಕುಮಾರ
ತಂದಿಹನು ಸುಖಸಾರ
ನಿಂದಿಹನು ನವಯುಗದೆ ನಲಿದು
ಕುಂದದಲೆ ಹರಡುತಿದೆ ಅವನಮರವಾಣಿ.

ಭೌತಿಕದ ಮನುಜರಿಗೆ
ಆತ್ಮಿಕದ ಮನುಗಳಿಗೆ
ಅನುವರಿದು ಅನುಭವವರುಹಿದ
ಸುಕುಮಾರ ಶುಭವಾಣಿ ಪೂಡಿಹುದು ಮರಳಿ.

ಅವನಮರ ಸಂದೇಶ
ಭುವನ ಜನಕುಪದೇಶ
ಜವನ ಜಂಭಕಂಕುಶ ತಿಳಿಯೆ
ಕಿವಿಗೊಡಲು ಕೇಳುತಿದೆ ಆ ಅಂತರ್ವಾಣಿ.

ಗಮನಿಸದೆ ಕಷ್ಟವನು
ಎಮಗಾಗಿ ದೇಶವನು
ಸಂಚರಿಸಿ ತಾಳೆಗರಿಗಳನು
ತಂದಿರಿಸಿ ತಿಳಿಹೇಳಿತಾ ಕುವರವಾಣಿ

ಶಿವಯೋಗ ಸಾಧನೆಯ
ಸಾಹಿತ್ಯ ಶೋಧನೆಯ
ಸಾಕಷ್ಟು ಮಾಡೆಂದು ಹೇಳ್ದ
ಸುಕುಮಾರ ಶುಕವಾಣಿ ಕೇಳುತಿದೆ ಕೂಗಿ

## ಹೊನ್ನು ಹಕ್ಕಿ

ಇಪ್ಪತ್ತು ವರುಷದೊಳು
ಸಾಧಿಸಿದುದೇಂ ಹೇಳು
ಎಂದೆನುತ ಸಾಧಕರ ಕರೆದು
ಕೇಳುತಿದೆ ಸುಕುಮಾರನಾ ಹೃದಯವಾಣಿ.

ವೀರ ಪ್ರಗತಿಯ ಬಯಸಿ
ವೀರಶೈವ ಸಭೆ ರಚಿಸಿ
ರಾಜಿಸಿದ ಸುಕುಮಾರ ವಾಣಿ
ಸಾಧಿಸಿದುದೇನೆಂದು ಕೇಳುತಿದೆ ಹೇಳಿ !

ಶಕ್ತಿ ತನುವಿನೊಳಿರಲು
ಭಕ್ತಿ ಮನದೊಳಗಿರಲು
ಯುಕ್ತಿ ಬುದ್ಧಿಯೊಳಗಿರಲು
ಮುಕ್ತಿ ಎಷ್ಟರ ಮಾತು ಎನುತ್ತಿದೆ ವಾಣಿ.

ಕನ್ನಡಿಯ ಊಳಿಗಕೆ
ಕನ್ನಾಡ ಸಾಧನೆಗೆ
ಚನ್ನಾದ ಕಲಿತನವ ಕೊಟ್ಟ
ಸುಕುಮಾರ ಶುಕವಾಣಿ ಕರೆಯುತಿದೆ ಏಳಿ !

ಸ್ವಾರ್ಥವನು ಸಂಹರಿಸಿ
ಅರ್ಥವನು ಸಂಗ್ರಹಿಸಿ
ಸಾರ್ಥಕದ ಸೇವೆಯಂ ಮಾಡಿ
ಸುಕುಮಾರ ಗೌರವವ ಉಳಿಸೋಣ ಬನ್ನಿ !

## ಹೊನ್ನು ಹಕ್ಕಿ

ಸುಕುಮಾರನಿಲ್ಲಿಂದು
ಬಕಧ್ಯಾನದೊಳಗಿಂದು
ಲೋಕದಲಿ ಸುಳಿಯದಿರಿ ನೀವು
ಹೃದಯದೊಳು ಸುಕುಮಾರನಿರುತಿಹನು ಸತ್ಯ.

ದೇಹವದು ಅಡಗಿಹುದು
ರೂಹು ತಾ ಬಾಡಿಹುದು
ಮಾಹಾತ್ಮ ಸುಕುಮಾರ ವಾಣಿ
ಬಹುಕಾಲ ಬಾಳಲಹುದದುವೆ ಚಿರವಾಣಿ.

ತೊಲಗಲಯ್ ಹುಲು ಮರಹು
ಬೆಳಗಲಯ್ ಚಲು ಹೊಳಹು
ಸುಳಿಯಲಯ್ ಸವೆಯದಾ ಸೊಗಸು
ಬೆಳೆಯಲಯ್ ಬಾಳಲಯ್ ಒಗ್ಗೂಡಿ ನಾಡು.

# ಬೆಳಗಿ ಬಾ !

೧

ಬೆಳಗಿ ಬಾ ತೊಳಗಿ ಬಾ
ಸುಕುಮಾರ ಸುಖಸಾರ
ಸಕಲಜನ ಹೃದ್ಗುಹೆಯ ಕತ್ತಲೆಯ ಕಳೆದು,

ಧರ್ಮಸ್ತಂಭವ ರಚಿಸಿ
ತ್ಯಾಗ ಹಣತೆಯನಿಕ್ಕಿ
ಯೋಗತೈಲವನೆರೆದು
ಭೋಗ ಜ್ಯೋತಿಯ ಬೆಳಗಿ ತೊಳಗಿ ಬಾ ನಲಿದು.

೨

ವಿಜ್ಞಾನ ಯುಗದಲಿ
ಸುಜ್ಞಾನ ಮಾರ್ಗದಲಿ
ಅಜ್ಞರನು ನಡೆಯಿಸಲು ಬೇಗ ಬಾ ಇಲ್ಲಿ,

ಸನ್ಯಾಸ ಜೀವನಕೆ
ವಿನ್ಯಾಸ ಭಾವಕ್ಕೆ
ಅನ್ಯಾಯ ಅಧೋಗತಿ
ಬೆನ್ನು ಬಿದ್ದಿವೆ, ಪ್ರಗತಿ ಪಂಥವೆ ಇಲ್ಲ!

೩

ಜೀವನದಿ ಗುರಿಯಿಲ್ಲ
ಬಾಳಿನಲಿ ಬೆಳಗಿಲ್ಲ
ಬದುಕಿನಲಿ ಸುಖವಿಲ್ಲ ಇದೇತರ ಬಾಳು ?

ಸನ್ಯಾಸ ಜೀವನಕೆ
ವಿಜ್ಞಾನ ಯುಗದಲ್ಲಿ
ಇಹವಿಲ್ಲ ಪರವಿಲ್ಲ
ಕಾಲವನುಸರಿಸಿ ಕ್ರಾಂತಿಯನು ತೋರೇಳು

೪

ನೀನು ಬಿತ್ತಿದ ಬೀಜ
ನೀನು ಬೆಳಸಿದ ವೃಕ್ಷ
ಹೂಕಾಯಿಗಳ ಬಿಡದೆ ಬರಡಾಗಿರುವುದೇ ?

ಕ್ರಾಂತಿಯುದಕವನೆರೆದು
ಭ್ರಾಂತಿ ಕಸವನು ಕಿತ್ತು
ಶಾಂತಿ ಪುಷ್ಪವನಿತ್ತು
ಪ್ರಗತಿ ಫಲವೀಯೆ ಸಾರ್ಥಕವಾಗಲರಿದೆ ?

೫

ನಾಡಸೇವೆಯ ಕಲಿಸು
ನುಡಿಯಸೇವೆಯ ಹರಸು
ನಡೆನುಡಿಗಳನು ಪರಿಶುದ್ಧವಾಗಿರಿಸು,

ಸಮತೆ ಸಮಭಾವ ಸಹ-
ಕಾರಗಳನುಗ್ರಹಿಸು
ಮಮಕಾರ ಹಂಕಾರ
ಸಂಹರಿಸಿ ಸಲುಹಿ ತಿರೆಯಲ್ಲಿ ಪ್ರಜ್ವಲಿಸು.

# ತೆರೆ ಬಾಗಿಲು

ಹೊತ್ತು ಮೂಡಿತು
ಗೊತ್ತು ತೀಡಿತು
ಸುತ್ತು ಜಾಗ್ರತಿ ಹಬ್ಬಿತು
ತೆರೆಯು ಬಾಗಿಲು
ಮೊರೆಯು ನೀ ಬಲು
ಪೊರೆಯು ನಮ್ಮನು ಮಂದಿರ

ಯೋಗಮಂದಿರ
ತ್ಯಾಗಮಂದಿರ
ನುಡಿಯ ನೆಲೆ ನೀನಲ್ಲವೆ ?
ನಿನ್ನ ವಾಙ್ಮಯ
ರನ್ನವಾಗಿಲ
ಇನ್ನು ತಳುಹದೆ ತೆರೆಯು ನೀ

ಇಸಿತು ಕಾಲೊಳು
ಕಲಿತು ನಿನ್ನೊಳು
ಮಲೆತು ಪೋಪುದು ಉಚಿತವೇ ?
ಕಲೆತು ಕಂದರು
ಒಲಿದು ಬಂದರು
ಉಲಿಯ ಬಾಗಿಲ ತೆರೆಯು ನೀ

## ಹೊನ್ನ ಹಕ್ಕಿ

ಬರೆಹಗಾರರು
ಬಲುಹಗಾರರು
ಬಗೆಯುಗಾರರು ಇಲ್ಲವೆ ?
ವಚನಕಾರರು
ರಚನಕಾರರು
ಕವನಕಾರರು ಕವಿತ್ರಿಯೆ ?

ಹಾಡುಗಾರರ
ಹಿಂಡು ಇಲ್ಲವೆ
ಹಾಡಿ ಬೇಡುವೆ ತೆರೆಯು ನಿ
ರಸದ ಕೋಡಿಯು
ಒಸರುವಂದದಿ
ನುಡಿಯ ಮಜ್ಜನ ಮಾಳ್ಪೆ

ಅಂದ ಚಂದವು
ಕುಂದದಂತೆ
ನುಡಿಯ ಹೂಗಳ ಮುಡಿಪೆವು
ನಂದದಾರತಿ
ಒಂದೆ ಮನದಲಿ
ತಂದು ಶಿವನಿಗೆ ಹಿಡಿವೆವು

ಬಾಳಿನುರಿಯೊಳು
ಬೀಳುತೇಳುತ
ಬಾಳಬಟ್ಟೆಯ ಕಾಣದೆ
ಕೈಯ ಹೊಸೆಯುತ
ಕಾಲ ಮಸೆಯುತ
ನಿನ್ನ ಬಾಗಿಲ ಸೇರ್ದೆವು

ನುಡಿಯ ಮಂದಿರ
ನುಡಿಯ ಚಂದಿರ
ನುಡಿಯ ಪೂಜೆಯ ಗೈವೆವು
ತೆರೆಯ ಬಾಗಿಲು
ತೋರು ಶ್ರೀಸುಕು-
ಮಾರನನು ಶಿವಮಂದಿರ !

## ವಟುಜೀವನ

'ಮುಂಬರು ಜನುಮದಿ ಶಿವಮಂದಿರದೊಳು
ನಿನ್ನನು ವಟುವನು ಮಾಡುವೆನು'
ಎಂಬುವ ವರವನು ಗುರುವೆನಗಿತ್ತರೆ
ಈಗಳೆ ಐಕ್ಯತೆ ಕೋರುವೆನು. ೪

ಶಿವಮಂದಿರದೊಳು ಸಾಧಕನಾಗಲು
ಅಲ್ಲಿನ ಧ್ಯೇಯವ ಸಾಧಿಪೆನು
ಶಿವನೇ ನಿನ್ನನು ಭವಭವಗಳಲಿ
ಅಲ್ಲಿಯೆ ಬರಿಸಲು ಬೇಡುವೆನು, ೮

ತೊರೆಯಲಿ ಮೀವೆನು ತಪವನು ಗೈವೆನು
ತನ್ಮಯನಾಗಲು ಹೆಣಗುವೆನು;
ಗಿರಿಯೊಳು ಸುಳಿವೆನು ಗವಿಯೊಳಗಿರುವೆನು
ಚಿನ್ಮಯ ರೂಪನ ನೆನೆಯುವೆನು. ೧೨

ಬೆಟ್ಟದ ತಾವರೆ ಹೂಗಳನೆತ್ತುವೆ
ಪತ್ರೆಯನೆತ್ತುವೆ ತಪಕಾಗಿ
ಕಟ್ಟಳೆ ಕೆಡಿಸದೆ ಬಿಟ್ಟುದ ಬಯಸದೆ
ಸ್ತೋತ್ರವ ಪಾಡುವೆ ಜಪಕಾಗಿ. ೧೬

ಕೈವಲ್ಯದ ಸಂಗೀತವ ಹಾಡುವೆ
ಹೇಳುವೆ ಕನ್ನಡ ವಚನಗಳ,
ಕೇವಲ ಕನ್ನಡ ನುಡಿಗಳ ಜೋಡಿಸಿ
ಕಟ್ಟುವೆ ಕನ್ನಡ ಕವನಗಳ. ೨೦

# ಹೊನ್ನು ಹಕ್ಕಿ

ಪಾಠವನೋದುವೆ ಪುರಾಣ ಹೇಳುವೆ
ಹಠಯೋಗವ ನಾ ಮಾಡುವೆನು
ನೋಟವ ನಿಲ್ಲಿಸಿ ಪ್ರಾಣವ ಸಲ್ಲಿಸಿ
ಕೂಟಾತ್ಮನ ನಾ ಕೂಡುವೆನು. ೨೪

ಗಿರಿಯೊಳು ಪ್ರಕೃತಿಯ ಚಲುವನು ನಿಟ್ಟಿಸಿ
ನವಿಲಿನ ಕೇಕೆಯ ಕೇಳುವೆನು
ಗರಿಗೆದುರುತ ತಾ ಕುಣಿಕುಣಿದಾಡುವ
ಸೊಬಗಿನ ನೋಟವ ನೋಡುವೆನು. ೨೮

ಪಶುಗಳ ಕಾಯುವ ಸೇವಕರೂದುವ
ಕೊಳಲಿನ ಗಾನದ ಸೊಬಗೇನು ?
ಹಸುಗಳ ಕರುಗಳು ಅಂಬಾ ಅಂಬಾ
ಎನ್ನುತ ಕೂಗುವ ಬೆಡಗೇನು ? ೩೨

ತಿಳಿ ತಿಳಿ ಹರಿಯುವ ಮಲಾಪಹಾರಿಣಿ
ನದಿಯಾ ನಿಲುವಿನ ಸೊಂಪೇನು ?
ಸುಳಿ ಸುಳಿ ಹಬ್ಬಿದ ಬಳ್ಳಿಯ ಮಂಟಪ
ಬುಡದಲಿ ನೆರಳಿನ ತಂಪೇನು ? ೩೬

ಅಲ್ಲಿನ ನಿರ್ಮಳ ನೇಮವ ನಡೆಸುತ
ದಿನಗಳ ಕಳೆವೆನು ಮೋದದಲಿ
ಅಲ್ಲಿನ ನಿಶ್ಚಲ ವಿದ್ಯೆಯನೋದುತ
ಲೇಖವ ಲಿಖಿಸುವೆ ಲೀಲೆಯಲಿ. ೪೨

# ಶಿವಯೋಗಮಂದಿರ

( ನೀಳ್ಗವಿತೆ.)

೧

ವಾತಾಪಿ ಪುರದ ಮಾರ್ಗದಲಿ ಬನಶಂಕರಿಯು
ಬಳಿಯಲಿ ಮಹಕೂಟ ಮಹಕ್ಷೇತ್ರದ
ಜೊತೆಯಲ್ಲಿ ಮಾಂಗಲ್ಯವೆಡೆಗೊಂಡು ಕನ್ನಡದಿ
ಶೋಭಿಪುದು ಶಿವಯೋಗ ಮಂದಿರವು.

೨

ನಿರಂಜನ ಪ್ರಣವಸ್ವರೂಪಿ ಹಾನಗಲ್ಲಿನ
ಶ್ರೀ ಕುಮಾರ ಮಹಾ ಶ್ರೀಗಳವರು
ನಿರತಿಶಯ ಕಾರಣಿಕತನದಿಂದ ಮನಮೆಚ್ಚಿ
ಸ್ಥಾಪಿಸಿದ ಶಿವಯೋಗ ಮಂದಿರವು.

೩

ಸುತ್ತು ಗಿರಿಗಳ ಕೋಟೆ ಉತ್ತುಂಗವಾಗಿಹುದು
ಬಾನಿನೆತ್ತರಕೆ ಮಾಮರ ನೇರಿಳೆ
ಮುತ್ತುಗದ ಮರಗಳವು ಸಾಲು ಸಾಲಾಗಿ ನೆರೆ
ಬೆಳದಿರುವ ಶಿವಯೋಗಮಂದಿರವು.

೪

ಬಗೆಬಗೆಯ ಬಳ್ಳಿಗಳು ಹುಲುಸಾಗಿ ಬೆಳೆಬೆಳೆದು
ವೃಕ್ಷಗಳಮೇಲೆ ಕುಡಿಯಿಟ್ಟು ಹರಹಿ
ಸೊಗಸಾಗಿ ಹೆಣೆಹೆಣೆದು ಕಟ್ಟಿರುವ ಮಂಟಪದ
ನೆರಳಿಗುವ ಶಿವಯೋಗ ಮಂದಿರವು.

## ಹೊನ್ನ ಪಕ್ಕಿ

೫

ಗಗನ ಮಲ್ಲಿಗೆಯ ಮರಗಳು ಗಗನ ಸ್ಪರ್ಧಿಸುತೆ
ಮಿಗೆ ಬೆಳೆದು ಹೂಬಿಟ್ಟು ಬಳಕುವವು
ಮೊಗವೆತ್ತಿರುಳು ನೋಡೆ ಮುಗಿಲ ಹೂವಿಟ್ಟಂತೆ
ಕಾಣುವುದು ಶಿವಯೋಗಮಂದಿರವು.

೬

ವರ್ಷಋತುವಿನಲಿ ಕರ್ಷಕರು ಉತ್ತುಬಿತ್ತಿರುವ
ಫಲವಾಗಿ ಮೆಯ್ದುಂಬ ಹಸುರುಡುಗೆಯ
ಹರ್ಷದಿಂದುಟ್ಟು ನಿಂತಿಹ ತಪಸ್ವಿನಿಯಂತೆ
ರಂಜಿಪುದು ಶಿವಯೋಗಮಂದಿರವು.

೭

ಮಲಪ್ರಭಾ ತರಂಗಿಣಿ ಅಬ್ಬರದಿ ಹರಿಯುತ್ತ
ಕಾಡುಗಳ ಕೊರೆಯುತ್ತ ಬಂಡೆಗಳ
ಮೇಲಿಂದ ಧುಮುಕುತ್ತ 'ಘೋ' ಎಂದು ಕೂಗುತ್ತ
ಮೆರೆಯುವುದು ಶಿವಯೋಗಮಂದಿರದಿ.

೮

ತಂಗಾಳಿ ತೂರುವುದು ತನಿಗಂಪು ತೀಡಿಹುದು
ನವಿಲುಗಳು ಕೂಗುವುವು ಕುಣಿಯುವವು.
ಭೃಂಗಾಳಿ ಸುಳಿಯುವವು ಹೂವುಗಳ ಮಕರಂದ
ಕುಡಿಯುವವು ಶಿವಯೋಗದಾಶ್ರಮದಿ.

೯

ಶ್ರಾವಣದ ಮಾಸದಲಿ ನೇರಿಳೆಯ ವೃಕ್ಷಗಳ
ಕೊಂಬೆ ಕೊಂಬೆಗಳಲ್ಲಿ ಹೂ ಹಣ್ಗಳು
ಸುರಿದಿರಲು ತುಂಬಿ ಗಿಳಿವಿಂಡುಗಳು ನೆರೆನೆರೆದು
ತನಿರಸವನೀಂಟಿ ನಲಿವವು ತಮ್ಮೊಳು.

೧೦

ಮಧುಮಾಸವನು ತಾನು ಮೆಯ್ವೆತ್ತು ಮೂಡುತಿರೆ
ಚಿಗುರಿಟ್ಟು ಚಲುವೊಡೆಯೆ ತರುಲತೆಗಳು
ಮೃದು ಮಧುರತೆಗಳ ತಾ ಸವಿಯುವಳು ವನದೇವಿ
ಸ್ವಾಗತವ ಹಾಡುವವು ಕೋಗಿಲೆಗಳು.

೧೧

ತೊರೆಯಲ್ಲಿ ಮೊಸಳೆಗಳು ಗಿರಿಯಲಿ ಚಿರತೆಗಳು
ಗಿಡಗಂಟೆಗಳಲಿ ಹಾವು ಹುಳಗಳು
ಇರುತಿಹವು ಜಾತಿ ಹಿಂಸೆಯ ಬಿಟ್ಟು ಜ್ಞಾತಿಪ್ರೇ-
ಮವ ತೊಟ್ಟು ಶಿವಯೋಗ ಮಂದಿರದೊಳು.

೧೨

ಬಿಲ್ವಪತ್ರಿಯ ಹಲವು ಬನಗಳಿಹವಲ್ಲಲ್ಲಿ.
ಬೆಟ್ಟದಾವರೆ ಗಿಡಗಳಿರುವವಲ್ಲಿ
ಚಲ್ವ ಕಾಡಮಲ್ಲಿಗೆ ಮುಂತಾಗಿ ನಿಸರ್ಗದ
ಗಿಡಗಳಿವೆ ಶಿವಯೋಗ ಮಂದಿರದಲಿ.

೧೩

ಹತ್ತಾರು ಮಠಗಳನು ಕಲ್ಲಿನಲಿ ಗಚ್ಚಿನಲಿ
ಚಲುವಾಗಿ ಕಟ್ಟಿಸಿಹರಲ್ಲಲ್ಲಿ
ಹೊತ್ತಾರೆ ಎದ್ದು ಶಿವಯೋಗ ಮಾಳ್ಪುದಕೆ ಗವಿ–
ಯೊಂದಿಹುದು ಶಿವಯೋಗ ಮಂದಿರದಲಿ.

೧೪

ವಟುವೃಂದವಿಹುದು ಹಠಯೋಗ ಸಾಧನೆಯ ನೆಸ
ಗುವದು ಪಾಠಗಳ ಪಠಿಸುವುದು ನಿತ್ಯ
ಚಟಗಳನು ತೊಡೆದಿಹುದು ಸಟೆಯಾಡದಂತಿಹುದು
ನಿಜಕಾಗಿ ಶಿವಯೋಗ ಮಂದಿರದಿ.

೧೫

ಶಿವಯೋಗ ಸಾಧಕರು ಶಿವಜ್ಞಾನ ಬೋಧಕರು
ಶಿವಪುರಾಣ ವಾಚಕರಲ್ಲಿರುವರು
ಶಿವಕಥಾ ಶ್ರಾವಕರು ಸಾಹಿತ್ಯ ಶೋಧಕರು
ಶಿವಯೋಗಮಂದಿರದಿ ವಾಸಿಸುವರು.

೧೬

ಎಲ್ಲ ಋತುಗಳೊಳೆಲ್ಲ ಶಿವಯೋಗ ಸಾಧಕರು
ತೊರೆಯಲ್ಲಿ ಮೀಯುವರು ತಪವನ್ನು
ಸಲ್ಲೀಲೆಯಿಂದಾಚರಿಪರು ಹಬ್ಬದಂತೆ
ನೇಮದಲಿ ಶಿವಯೋಗ ಮಂದಿರದಿ.

೧೭

ಕನ್ನಡವ ಕಲಿಯುವರು ಸಂಸ್ಕೃತವನೋದುವರು
ಸಂಸ್ಕಾರ ಹೊದ್ದಿಹರು ಹೃದಯದಲ್ಲಿ
ಚನ್ನಡೆಯ ನಡೆಯುವರು ಚನ್ನುಡಿಯ ನುಡಿಯುವರು
ಚನ್ನಿಗರು ಶಿವಯೋಗ ಮಂದಿರದಲಿ.

೧೮

ಉಪ್ಪಿಲ್ಲ ಕಾರಿಲ್ಲ ಹುಳಿಯಿಲ್ಲ ಊಟದಲಿ
ಕಿನಿಸಿಲ್ಲ ಕೊಂಕಿಲ್ಲ ನೋಟದಲಿ
ಒಪ್ಪಿಲ್ಲ ಮಾಟದಲಿ ಬೆಡಗಿಲ್ಲ ವೇಷದಲಿ
ಯೋಗಿಗಳ ಶಿವಯೋಗ ಮಂದಿರದಲಿ.

೧೯

ಶ್ರಾವಣದ ಮಾಸದಲಿ ಶಿವಭಕ್ತ ಜನವೃಂದ
ಶ್ರವಣಸುಖ ಪಡೆಯಲ್ಕೆ ಬರುವರಲ್ಲಿ
ಶ್ರಾವಣದ ಶಿವಪೂಜೆ ಶಿವಗೋಷ್ಠಿ ನಡೆಯುವದು
ವೈಭವದಿ ಶಿವಯೋಗ ಮಂದಿರದಲಿ.

೨೦

ಮಾಘ ಮಾಸದೊಳು ಶಿವರಾತ್ರಿ ಸುಸಮಯದೊಳು
ತೇರು ನಡೆವುದು ಮೀರಿದುತ್ಸಾಹದಿ
ಯೋಗ ಭೋಗಗಳ ಸಮ್ಮಿಲನ ಭಕ್ತಿಮುಕ್ತಿಗಳ--
ಸಮ್ಮಿಲನ ಶಿವಯೋಗ ಮಂದಿರದಿ.

೨೧

ಗ್ರಂಥಗಳ ಭಾಂಡಾರವಲ್ಲಿಹುದು ಅದರಲ್ಲಿ
ವೇದಾಂತವಿಜ್ಞಾನ ಸಾಹಿತ್ಯದ
ಗ್ರಂಥಗಳು ತಾಳೆಗರಿ ಹೊತ್ತಗೆಗಳಿರುವವು
ಒಹುವಾಗಿ ಶಿವಯೋಗ ಮಂದಿರದಿ.

೨೨

ಲಿಂಗವಂತರಿಗೆ ಲಿಂಗವೆ ಕುರುಹು ಲಿಂಗವದು
ಹೇಗಿರಲು ಬೇಕೆಂಬುದಾರರಿಯುರು
ಮಂಗಲದ ಶಿಲೆಯಿಂದ ಶಾಸ್ತ್ರೋಕ್ತ ಲಿಂಗಗಳ
ರಚಿಸಿತ್ತೈ ಶಿವಯೋಗ ಮಂದಿರವು.

೨೩

ಗುರುಲಿಂಗ ಜಂಗಮರ ರೀತಿಯನು ರೂಪವನು
ನಿರಂಜನತೆಯನು ಪರಿಪಾಲಿಸಿತು
ಪರಿಶುದ್ಧ ಭಸ್ಮವನೆಸಗಿ ವೀರಶೈವವನು
ನಿಲ್ಲಿಸಿತು ಶಿವಯೋಗ ಮಂದಿರವು.

೨೪

ವೈದ್ಯವನು ವಿದ್ಯೆಯನು ಯೋಗವನು ತ್ಯಾಗವನು
ಗಾನವನು ವೃತ್ತಿಯನು ಬೋಧಿಸಿತು
ಧ್ಯಾನವನು ಮೌನವನು ವಿರತಿಯನು ಸುಮತಿಯನು
ಶಿಕ್ಷಿಸಿತು ಶಿವಯೋಗ ಮಂದಿರವು.

೨೫

ಬಲ್ಲಿದರ ಇಲ್ಲದರ ಧಾರ್ಮಿಕರ ಕಾರ್ಮಿಕರ
ರಾಗಿಗಳ ರೋಗಿಗಳ ಕಾಪಾಡಿತು
ಸಲ್ಲುವರ ಸಲ್ಲದರ ಸಣ್ಣವರ ದೊಡ್ಡವರ
ರಕ್ಷಿಸಿತು ಶಿವಯೋಗ ಮಂದಿರವು.

೨೬

ಶಿವಯೋಗ ಮಂದಿರಕೆ ನಾಲ್ವತು ಮೇಲೆರಡು
ವರುಷಗಳು ತುಂಬಿಹವು ನೂರ್ತುಂಬಲಿ
ನಾಲ್ಕೈದು ನೂರು ಶಿವಯೋಗಿಗಳನು ಪೋಷಿಸಿತು–
ಪಾಲಿಸಿತು ಶಿವಯೋಗ ಮಂದಿರವು.

೨೭

ಶಿವಯೋಗ ಮಂದಿರವು ಶಿವನಿರುವ ಮಂದರವು
ಶಿವಯೋಗ ಮಂದಿರವು ಕೈಲಾಸವು.
ಶಿವಯೋಗ ಮಂದಿರವು ಕನ್ನಡದ ಸುಕ್ಷೇತ್ರ
ಸತ್ಪಾತ್ರ ಶಿವಯೋಗ ಮಂದಿರವು.

೨೮

ಶಿವಯೋಗ ಮಂದಿರವ ಸ್ಥಾಪಿಸಿದ ಹರಿಕಾರ
ಹಾನಗಲ್ಲ ಕುಮಾರ ಧನ್ಯನೀನು
ಶಿವಯೋಗ ಸಂಸ್ಕೃತಿಯ ಕನ್ನಡದಿ ಮೊಳಗಿಸಿದ
ಶಿವಯೋಗಿ ಸುಕುಮಾರ ಮಾನ್ಯ ನೀನು.

# ಶರಣೆಯರ ಸ್ಮರಣೆ

ವೀರಮಹಿಳೆಯರೇ ನೆನೆಯಿರೌ ನಿಮ್ಮ ಪೂರ್ವಜರ,
ಶಿವೈಕ್ಯರಾದ ಶರಣೆಯರ ರಣೈಕ್ಯರಾದ ರಾಣಿಯರ

ಉಡುತಡಿ ಗ್ರಾಮದೊಳ್ ಜನಿಸಿ ಕಡುತರ ವಿರತಿಯನು ವಹಿಸಿ
ಮೃಡನೊಳು ಬೆರೆದ ಮಾದೇವಿಯಂ ನೆನೆಯಿರೌ ಶರಣೆದುಗ್ಗಳೆಯಂ ೧

ಪುರಹರ ಪೂಜೆಯನು ಮಾಡಿ ಸ್ಮರಹರನಲ್ಲಿಯೊಂದಾಗಿ
ಮೆರೆದಿಹ ನೀಲಲೋಚನೆಯಂ ಸ್ಮರಿಸಿರೌ ಅಕ್ಕನಾಗವೆಯಂ ೨

ವಿಮಳೆ ಕದಿರೆ ರೆಮ್ಮವ್ವೆ ಸುಮತಿ ಧೀರರೇಚವ್ವೆ
ಕಮಲಾದೇವಿಯಂಬವರಂ ನಮಿಸಿರೌ ವೈಜಯಕ್ಕಗಳಂ ೩

ಕಾಲಿನಿಂದ ನಡೆಯದ ಕಾರಿಕಾಲ ಅಮ್ಮೆಯಂ
ಹಾಲನಿತ್ತ ಕೊಡಗೂಸನಂ ಸ್ತುತಿಸಿರೌ ಚೋಳಿಯಕ್ಕಗಳಂ ೪

ಮಾರಪಿತನ ಕಿತ್ತು ಮಾರ ವೈರಿಯನು ನಿಲಿಸಿ
ಮೆರೆದ ಧೀರೆ ಗುಡ್ಡವೆಯಂ ಭಜಿಸಿರೌ ಶ್ರೇಷ್ಠ ಶರಣೆಯರಂ ೫

ವೀರ ವನಿತೆ ಚನ್ನಮ್ಮ ವೀರ ಮಾತೆ ಮಲ್ಲಾಂಬೆ
ಧೀರೋದಾತ್ತ ರಾಣಿಯರಂ ಹರಿಸಿರೌ ಶೂರ ಮಹಿಳೆಯರಂ ೬

# ಬುಡುಬುಡಿಕಿಯ ಹಾಡು

ಬುಡುಬುಡಿಕನ ಬುಡವನೇನೆಂಬುದ ತಿಳಿಯಬೇಕಣ್ಣ
ನೃಡನಾಜ್ಞೆಯಲಿ ಅದ ತಿಳಿದಂತೆ ಹೇಳುವೆವು ಕೇಳಿರಣ್ಣ

ಹಿಂದೊಮ್ಮೆ ತಪಗೈದಿತು ಸನಕಾದಿ ಋಷಿವೃಂದ
ನಂದಿಕೇಶ್ವರ ನಟರಾಜರಾಜನೊಲಿದು ವರವೇನು ಬೇಕೆಂದ
ವೈಯಾಕರಣ ಶಾಸ್ತ್ರಾರಂಭಕ್ಕೆ ವರಪ್ರಸಾದ ನೀಡೆಂದ
ಸ್ಥಾಣುವಾಸಮಯದಲಿ ನಾಟ್ಯವೇಷವ ಧರಿಸಿ ನೃತ್ಯವಾಡಿದ
ಕೈ ಡಮರುಗವನ್ನು ಹದಿನಾಲ್ಕು ಸಲ ಬಾಜಿಸಿದ
ಹೊರಹೊಂಟ ಹದಿನಾಲ್ಕು ಶಬುದಗಳೆ ಹದಿನಾಲ್ಕು ಸೂತ್ರಗಳಾದವು
ಅವಕ್ಕೆ ಮಾಹೇಶ್ವರ ಸೂತ್ರಗಳೆಂದು ಹೆಸರು ಕೇಳಿರಣ್ಣ
ಅವುಗಳಾಧಾರದಿಂದ ವ್ಯಾಕರಣ ಶಾಸ್ತ್ರ ವಿರಚಿಸಿದ
ವೈಯಾಕರಣಿಯೆಂದು ಪ್ರಸಿದ್ಧನಾದ; ವ್ಯಾಕರಣ ಸೂತ್ರ ಪ್ರವಕ್ತನಾದ
ಅಂದು ಮಾಹೇಶ್ವರನು ಡಮರುಗ ಬಾಜಿಸಿ ಬೋಧಿಸಿದುದೆ
ಇಂದಿಗು ಇರುವ ಬುಡುಬುಡಿಕಿಯ ವೇಷಕ್ಕೆ ಮೂಲ ಕಾಣಿರಣ್ಣ

(ಅಂದು ಪರಮಾತ್ಮನು ಋಷಿಗಳಿಗೆ ಮಾತ್ರ ಸಂಜ್ಞಾ ಸೂತ್ರಗಳ ಬೋಧಿಸಿದನು. ಅಂದಿಂದಿಗು ಬುಡಬುಡಿಕನು ಮನೆಮನೆಗೆ ಅಲೆದು ಜೀವ ಸೂತ್ರಗಳ ಬೋಧಿಪನು; ಡುಂ ಡುಂ ಡುಂ ಡುಂ ಡುಂ ಡುಂ ಡುಂ ಡುಮ್ಽಽ)

ಒಂದು ನುಡಿಯ ನುಡಿತದ ನೋಡಿರಣ್ಣ
ಸರ್ವಮಂಗಳೆ ಜಗದಂಬೆ ಕೇಳಿರಣ್ಣ
ಮಾಹೇಶ್ವರೀ ಮಹಾಶಕ್ತಿ ತಿಳಿಯಿರಣ್ಣ
ಪರಮಾತ್ಮನೆ ಪಂಡಿತಾರಾಧ್ಯ ಕಾಣಿರಣ್ಣ
ನರಲೋಕವುದ್ಧರಿಸೆ ಗುರುವಾಗಿ ಬಂದನಣ್ಣ–
ಜಗದ್ಗುರುವಾಗಿ ಅವತರಿಸಿದನಣ್ಣ.

ಶ್ರೀಗಿರಿ ಮಲ್ಲಿಕಾರ್ಜುನ ಲಿಂಗರೂಪುಕಳೆ-
ಮೂಡಿ ಬಂದ ಮೂರುತಿಯಣ್ಣ
ಭಾಷ್ಯಕೃತಿಕರ್ತನಾತನ ಧ್ಯಾನ ಸದಾ ಪಾವನವಣ್ಣ
ಡುಂ ಡುಂ ಡುಂ ಡುಂ ಡುಂ ಡುಂ ಡುಂ ಡುಮ್ಽಽ

ಹಬ್ಬ ಹರದಿನಗಳು ಬರತೈದಾವಣ್ಣ
ಉಬ್ಬುಬ್ಬಿ ಮಾಡಬೇಕಣ್ಣ
ಉಬ್ಬುಬ್ಬಿ ಮಾಡಬೇಕಣ್ಣ
ಸಂಸಾರದಬ್ಬರ ನೀಗಬೇಕಣ್ಣ
ಸಂಶಯ ಸಂಕೋಚಗಳುಬ್ಬರ ಹರಿಯಬೇಕಣ್ಣ
ಡುಂ ಡುಂ ಡುಂ ಡುಂ ಡುಂ ಡುಂ ಡುಂ ಡುಮ್ಽಽ

ಅರುಣೋದಯಕ್ಕೆ ಮುನ್ನ ಏಳಬೇಕಣ್ಣ
ಅಂತರಾತ್ಮನ ನೆನೆಯಬೇಕಣ್ಣ
ಅಂತರಂಗದ ಕಳಂಕ ಕಳೆಯಬೇಕಣ್ಣ
ಅಂತರ್ಲೀನವಾಗಬೇಕಣ್ಣ
ಇದು ಜಗದಿ ಸತ್ಯಣ್ಣ, ಇದ ನಾ ಹೇಳತೇನಿ ಕೇಳಿರಣ್ಣ
ಇದೇನು ಎಂದು ಉದಾಶೀನ ತೋರಬೇಡಿರಣ್ಣ
ಡುಂ ಡುಂ ಡುಂ ಡುಂ ಡುಂ ಡುಂ ಡುಂ ಡುಮ್ಽಽ

ಎದ್ದು ಕೈಕಾಲು ಮೊಗ ತೊಳೆಯಿರಣ್ಣ
ಮುದ್ದು ಮಕ್ಕಳ ಲಾಲಿಯಿಂದೆಬ್ಬಿಸಿರಣ್ಣ
ಬುದ್ಧಿ ಹೇಳಿ ವಿದ್ಯೆ ಕಲಿಯಲು ಮಠಕ್ಕೆ ಕಳುಹಿರಣ್ಣ
ವಿದ್ಯೆಯಿಲ್ಲದವನು ಹದ್ದಿಗಿಂತ ಕಡೆಯಣ್ಣ
ವಿದ್ಯೆಯಿಂದಲಿ ಸಕಲ ಸಿದ್ಧಿಗಳು ಸಾರಿಬರುವವಣ್ಣ
ವಿದ್ಯೆಯೆ ಪರಮ ದೈವ ಕಾಣಿರಣ್ಣ

## ಹೊನ್ನ ಪಕ್ಕಿ

ವಿದ್ಯೆಯಿಲ್ಲದ ಮನೆ ವಿಪಿನಾಂತರವಣ್ಣಾ
ವಿದ್ಯೆಯಿಲ್ಲದವರು ವಿಪಿನ ಮೃಗಗಳಣ್ಣಾ
ಡುಮು ಡುಮು ಡುಮು ಡುಮು ಡುಮು ಡುಮು ಡುಮು ಡ್ಯುಮ್ss

ಮೂಡಣ ದಿಕ್ಕಿಗೊಂದು ಚುಕ್ಕೆ ಮೂಡುತದಣ್ಣಾ
ಬೆಳ್ಳಿಯಂತೊಮ್ಮೆ ಬಂಗಾರದಂತೊಮ್ಮೆ ಹೊಳೆಯುತದಣ್ಣಾ
ಬೆಳಗಿನ ಚುಕ್ಕೆ ಬೆಳಗದಮುನ್ನ ಏಳಬೇಕಣ್ಣಾ
ಸಂಸಾರ ತಿಮಿರ ಹರಿಯಬೇಕಣ್ಣಾ ; ಸಂಸಾರ ತಿಮಿರದಲ್ಲಿ
ಬೆಳ್ಳಿಚುಕ್ಕೆಯಾಗಿ ಬೆಳಗಬೇಕಣ್ಣಾ–
ಚಿನ್ನದ ಚುಕ್ಕೆಯಾಗಿ ಹೊಳೆಯಬೇಕಣ್ಣಾ
ಮರುಳು ನಸಗು ಹರಿದು ಹೋಗತದಣ್ಣಾ
ಮಹಿತಪುರುಷ ತಾನಾಗತಾನಣ್ಣಾ
ಡುಮು ಡುಮು ಡುಮು ಡುಮು ಡುಮು ಡುಮು ಡುಮು ಡ್ಯುಮ್ss.

ಲೆಕ್ಕವಿಲ್ಲದ ದಿನಗಳು ಬಾಳಿಯೇನಣ್ಣಾ
ಬಿಕ್ಕಿ ಬದುಕು ಬದುಕಿಯೇನಣ್ಣಾ
ತ್ವಕ್ಕು ಸುಖಕ್ಕೆ ಸಿಕ್ಕಿಯೇನಣ್ಣಾ
ತಿಕ್ಕಿ ಮಣ್ಣುಮುಕ್ಕಿ ಹೋಗಬೇಡಣ್ಣಾ
ಲಕ್ಕವಿಟ್ಟುನೋಡು ನೋಡಣ್ಣಾ
ಈ ಬುಡಬುಡಿಕನ ಮಾತು ಮಿಕ್ಕು ಹೋಗಬೇಡಣ್ಣಾ
ತಕ್ಕುದೆ ದಕ್ಕತೈತಿ ನಿನಗಣ್ಣಾ
ಡುಮು ಡುಮು ಡುಮು ಡುಮು ಡುಮು ಡುಮು ಡುಮು ಡ್ಯುಮ್ss

ಈ ಲೋಕದಾಟ ನಂಬಬೇಡಣ್ಣಾ
ಈ ಲೋಕದೊಳಗ ಏನು ಇಲ್ಲಣ್ಣಾ
ಈ ಲೋಕವೊಂದು ಇಂದ್ರಜಾಲವಣ್ಣಾ
ಈ ಲೋಕವೊಂದು ಸ್ವಪ್ನ ಸೃಷ್ಟಿಯಣ್ಣಾ

ಹೊನ್ನು ಹಕ್ಕಿ

ಇದರೊಡನಿದ್ದು ಇಲ್ಲದಂತಿರಬೇಕಣ್ಣಾ
ನೀನು ಬರುವಾಗ ತಂದುದೇನಣ್ಣಾ
ನೀನು ಹೋಹಾಗ ಒಯ್ವುದೇನಣ್ಣಾ
ಆಲೋಚಿಸಿ ನೋಡು ನೋಡಣ್ಣಾ
ಬುಡು ಬುಡುಕಿ ಏನು ಹೇಳತಾನೆನಬೇಡಣ್ಣಾ
ಬುಡುಬುಡುಕಿ ಹೇಳ್ವುದೆಲ್ಲ ಬುಡುಬುಡುಕಿಯೆಂದನಬೇಡಣ್ಣಾ
ಜೋಕೆ ಜೋಕೆಯಾಗಿರಣ್ಣಾ-ಇನ್ನು ಅನೇಕ ಮಾತಬೇಡಣ್ಣಾ
ಡುಮು ಡುಮು ಡುಮು ಡುಮು ಡುಮು ಡುಮು ಡುಮು ಡುಮ್ss

ಹೆ ತಾಯಿ ನಿನಗೊಂದು ಮಾತು ಹೇಳುವೆನಮ್ಮ
ಕಾಯದೊಳಗೊಂದು ದೇವರುಂಟಮ್ಮ
ಮಾಯದ ಮಾತಲ್ಲಿದು ತಿಳಿದು ನೋಡಮ್ಮ
ಹ್ಯೇಯ ಸಂಸಾರವ ನಚ್ಚ ಬೇಡಮ್ಮ
ಮಾಯಾರೂಪವ ಮೆಚ್ಚಬೇಡಮ್ಮ
ಧ್ಯೇಯವೇನೆಂಬುದನರಿಯಮ್ಮ
ಮಾಯದಬೊಂಬೆ ನೀನಾಗಬೇಡಮ್ಮ
ಮೋಹದ ಬೊಂಬೆ ನೀನಾಗಬೇಡಮ್ಮ
ಮಾಯಿದೇವನ ಮರೆಯಬೇಡಮ್ಮ
ಕಾಯದ ಕಣ್ಣು ಕಳಚಿಹಾಕಮ್ಮ
ಮಾಯದ ಬೆಡಗು ಮುರಿದು ಹಾಕಮ್ಮ
ಸಾಯದ ಸೊಗವ ಸಾರಮ್ಮ
ನಾನು ಹೋಗಿ ಬರುವೆನಮ್ಮ
ನನಗೊಂಡು ಸಾಕ್ಷಿ ಭಿಕ್ಷವ ನೀಡಮ್ಮ
ಒಂದು ಮೂರಾಗಲಿ, ಮೂರು ನೂರಾಗಲಿ
ಸೂರ್ಯ ಚಂದ್ರರಿರುವವರೆಗೆ ನಿನ್ನ ವಂಶ ಬಾಳಿ ಬೆಳಗಲಿ
ಡುಮು ಡುಮು ಡುಮು ಡುಮು ಡುಮು ಡುಮುಡುಮು ಡುಮ್ss

# ಜೋ ! *

ಬಾಳ್ ಬಾಳ್ ಎಂಬೆವು ಮುದ್ದು ಮಗುವಿಗೆ
ತಾಳ್ ತಾಳ್ ಎಂಬೆವು ಸಿದ್ಧ ಶಿಶುವಿಗೆ
ಜಯ್ ಜಯ್ ಎಂಬೆವು ರನ್ನ ಕುಮಾರಗೆ
ಜೋ ಜೋ ಎಂಬೆವು ಚನ್ನ ಕುಮಾರಗೆ ೧

ಬಣ್ಣದ ತೊಟ್ಟಿಲೊಳಗೆ ಆಡುವ ಮಗುವಿಗೆ
ಹುಣ್ಣಿವೆಯ ಚಂದ್ರನಂತೆ ಹೊಳೆಯುವ ಮಗುವಿಗೆ
ಕಣ್ಣಿಗೆ ಮುದ್ದಾಗಿ ತೋರುವ ಕಂದಗೆ
ನನ್ನಿಯ ನುಡಿಯುಲಿಯಿಂತೆಂದು ಹರಸುವೆವು
ಚನ್ನ ಕುಮಾರನೆಂದು ಹೆಸರಿಟ್ಟು ಹರಸುವೆವು ೨

ನೂರು ವರುಷವಾಗಲಿ
ನೂರು ಹುರುಷವಾಗಲಿ
ಗುರು ಕರುಣದಿಂದ ಬಂದ
ಚಾರ 'ಚನ್ನ ಕುಮಾರಗೆ' ೩

---

* ಕೊಪ್ಪಳದ ಶ್ರೀಮಂತ ಸಿದ್ಧಪ್ಪನವರು ಪಂಪಣ್ಣಸೆಟ್ಟರು ಇವರಿಗೆ ಸನ್ನಿಧಿಯವರ ಆಶೀರ್ವಾದದಿಂದ ಗಂಡು ಮಗುವಾಗಿ ನಾಮಕರಣ ಮಾಡುವಾಗ ಸನ್ನಿಧಿಯವರು ಆ 'ಚನ್ನ ಕುಮಾರ' ಮಗುವನ್ನು ಆಶೀರ್ವದಿಸಿ ವಿರಚಿಸಿದ ಹಾಡು.

ತೂಗುವ ತೊಟ್ಟಿಲ ಶೃಂಗಾರವಾಗಿ
ತಾಗುವ ವಸ್ತುವು ಬಂಗಾರವಾಗಿ
ಬಾಗಿಲ ಮನೆಗಳಿಗೆ ತೋರಣವಾಗಿ
ಬಂಧು ಬಳಗವೆಲ್ಲವದು ಒಂದಾಗಿ ೪

ಜಯವೆಂದು ಹಾಡಿರಿ
ಶುಭವೆಂದು ಹರಸಿರಿ
ಬಾಳೆಂದು ಬಗೆಯಿರಿ
ಬದುಕೆಂದು ನುಡಿಯರಿ ೫

# ನಾಲಿ ಗಂಗಪ್ಪ ಕವಿಗೆ

ಗಂಗಪ್ಪ ಕಬ್ಬದೊಳು
ಭೃಂಗದಾ ದನಿಯುಂಟು
ಜೇಂಗೊಡದ ತನಿಯ ರಸವುಂಟು ಚೆಲುವುಂಟು
ದಾಂಗುಡಿಯ ಕೇಳು ಕಾವ್ಯಜ್ಞ ೧

ಹೊಸ ದೃಷ್ಟಿ ಹೊಸ ಸೃಷ್ಟಿ
ಹೊಸ ಬಟ್ಟೆ ಹೊಸ ನಿಷ್ಠೆ
ಹೊಸದೆಸೆದು ತೋರುತಿಹವು ತೂರುತಿಹವೀ
ರಸಿಕ ಕಾವ್ಯದೊಳು ಕಾವ್ಯಜ್ಞ ೨

ಗಂಗಪ್ಪನಾ ಕಾವ್ಯ-
ಸಂಗ್ರಹವು ಸುಶ್ರಾವ್ಯ
ತುಂಗಜನ ಭಾವ್ಯ ಸಮಸ್ತ ಜನ ಸೇವ್ಯ
ಹೊಂಗನ್ನಡಮೊಳಿದುವೆ ನವ್ಯ ೩

ಗಂಗಪ್ಪ ಕವಿಯಲ್ಲಿ
ಗಂಗೆಯಾ ಸೆಲೆಯುಂಟು
ತುಂಗೆಯಾ ಸ್ಫೂರ್ತಿ ಗಾಂಭೀರ್ಯಗಳುಂಟು
ಸಂಗಮೇಶ್ವರನ ಕೃಪೆಯುಂಟು ೪

ಕನ್ನಡದ ಕವಿಯಾಗಿ
ಮುನ್ನಡೆವ ಚೆನ್ನುಡಿವ
ಉನ್ನತೋನ್ನತದ ಬಗೆಯುಂಟು ಬಲವುಂಟು
ಬಿನ್ನಾಣವುಂಟು ಭಾವಜ್ಞ ೫

ಸೋಮಧರ ಶ್ರೀ ಚರಣ
ಪ್ರೇಮಿ ಗಂಗಪ್ಪಂಗೆ
ಸ್ವಾಮಿ ಶ್ರೀ ನಿಡುಮಾಮಿಡಿಯ ಕರಿಬಸವಂ
ಕಾಮಿತವ ಕುಡುಗೆ ಕಾವ್ಯಜ್ಞ ೬

## ಜಗದ್ಗುರುವಿಗೆ

ಓ ಗುರುವೆ ನಿನ್ನ ರಸ
ರಾಗದಾಶೀರ್ವಾಣಿ
ತೂಗಿತೆನ್ನನ್ನು ಬಗೆಯ ತೊಟ್ಟಿಲೊಳಿಟ್ಟು
ಜೋಗುಳವ ಹಾಡಿ ಸಾರಜ್ಞ ೧

ತನ್ನ ಹೆಚ್ಚಳ ನೋಡಿ
ಹಣ್ಣುಹಾಲುಂಡಂತೆ
ಸನ್ಮೋದಗೊಳುವ ಸೇಹಿಗರ ಪಡೆದವನ
ಪುಣ್ಯಕೆಣೆಯುಂಟೆ ಸಾರಜ್ಞ ೨

ಒಡಲ ಹಾಲಿನ ಕಡಲ
ನುಡಿಯನುಣ್ಮುತ್ತ ಗಳ
ಬೆಡಗಿನಲಿ ಹೆಣೆದು ಕರುಣಿಸಿದೆ ನೀನೆನಗೆ
ಪೊಡಮಡುವೆ ನಾನು ಸಾರಜ್ಞ ೩

ಅರಿವಿನಾಗಸದಲ್ಲಿ
ತರಣಿಯಂದದಿ ಹೊಳೆವ
ಗುರುವರನ ಕರುಣೆ ನಿರುತ ಕಿರಣಿಸಲೆಂದು
ವರಬೇಡುತಿಹನು ಸಾರಜ್ಞ ೪

ನಗುತಿಹುದು ಬಗೆಬಳ್ಳಿ
ಒಗೆಬಗೆಯ ಹೂ ಬಿಟ್ಟು
ಸೊಗದ ಬಂಡುಣಿಯು ಝೋಂಕಾರದೋಂಕಾರ
ಮುಗಿಲ ಮುಟ್ಟುತಿದೆ ಸಾರಜ್ಞ ೫

**ಗಂಗಪ್ಪ ವಾಲಿ,**
ಹುಬ್ಬಳ್ಳಿ.

---

ಸನ್ನಿಧಿಯ ಕವನ ಕಲೆಯನ್ನು ಮನವಾರೆ ಮೆಚ್ಚಿ ಕವಿ ಗಂಗಪ್ಪ ವಾಲಿ ಯವರು ಬರೆದುದು.

# ನಮ್ಮ ಪ್ರಕಟನೆಗಳ ಬಗ್ಗೆ ಪತ್ರಿಕಾಭಿಪ್ರಾಯಗಳು.

## ನಾನು-ನೀನು

" ನಾನಾರೆಂಬುದನ್ನು ಅರಿ, ಕಾಯಕರಣಗಳು ನಾನೆಂಬ ಕರ್ತೃತೆಯನ್ನು ಹರಿ, ನಾನು ನೀನು ಒಂದೆಂಬುದೆ ಗುರಿ, ಈ ಮೂರು ಮಾತುಗಳೆ ಎಲ್ಲರ ಮುಂದಾರಿ" ಎಂಬುದು ಈ ಪುಟ್ಟ ಪುಸ್ತಕದ ಪುಣ್ಯಮಯವಾದ ಪೀಠಿಕೆ. "ತನ್ನ ಬಿಟ್ಟು ದೇವರಿಲ್ಲ" ಎಂಬುದು ಈ ಹೊತ್ತಿಗೆಯ ಜೀವಾಳ. "ಅಸತೋ ಮಾ ಸದ್ಗಮಯ" ಅಸತ್ಯದಿಂದ ಸತ್ಯದ ಸೀಮೆಯನ್ನು ಸೇರಿಸುವುದೇ ಈ ಗ್ರಂಥದ ಹೆಗ್ಗಳಿಕೆ. "ಚಿದಹಂ ಭಾವನೆಯು ಮಿಾಸಲು, ಅಜ್ಞಾನಾಹಂಭಾವನೆಯು ಎಂಜಲು" ಎಂಬುದು ಇದರ ನೀತಿ. "ಜಾತಿಭಾವದ ಮುಸುಗನ್ನು ತೆಗೆದರೆ ಮನುಷ್ಯರೆಲ್ಲರೂ ಒಂದೆ, ಜೀವಭಾವದ ಪರೆಯನ್ನು ಹರಿದರೆ ದೇಹಿಗಳೆಲ್ಲರೂ ದೇವರೆ" ಎಂಬುದು ಈ ಪುಸ್ತಕದ ರೀತಿ. "ನೀನು ಶಿವ ನಾನು ಜೀವ, ನೀನು ಮುಕ್ತ ನಾನು ಬದ್ಧ, ನೀನು ಸುಖಿ ನಾನು ದುಃಖಿ ಮುಂತಾದ ವಿಚಾರಗಳನ್ನು ವಿಸರ್ಜಿಸಿ ನಿರುಪಾಧಿಕವಾದ ನಿಜತತ್ವವೇ ತಾನೆಂದು ಗುರುಮುಖದಿಂದರಿತು ಅಳವಡಿಸಿಕೊಳ್ಳಬೇಕು" ಎಂದು ತಿದ್ದಿ ತಿಳಿಯಪಡಿಸುವುದೇ ಈ ಗ್ರಂಥದ ಗೋಪ್ಯಬೋಧೆ. "ನಾನು ನೀನು ಎಂಬುದರಲ್ಲಿ ನಾ (ಜೀವ) ನೀ (ಶಿವ) ಈ ಎರಡು ಅಳಿದರೆ 'ನು' (ಶುದ್ಧ ಬ್ರಹ್ಮ) ಒಂದೇ ಉಳಿಯುವುದು" ಎಂಬುದೇ ಈ ಹೊತ್ತಿಗೆಯ ತಿರುಳು. "ನಾನು ನೀನು ಒಂದೇ" ಎಂಬುದೇ ಈ ಪುಟ್ಟ ಪುಸ್ತಕದ ಸಾರ್ಥಕವಾದ ಕೊನೆಯ ಉಸಿರು. ಮುಮುಕ್ಷುಗಳು ಈ ಗ್ರಂಥವನ್ನು ಸಂಗ್ರಹಿಸುವುದು ಅತ್ಯಗತ್ಯ. ಲೇಖಕರಾದ ಶ್ರೀ ಜಗದ್ಗುರು ಜ. ಪ. ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯರವರ ಪವಿತ್ರ ವದನದಿಂದ ಇಂತಹ ಅತ್ಯುತ್ತಮ ಹೊತ್ತಿಗೆ ರತ್ನಗಳು ಇನ್ನೂ ಕೆಲವು ಹೊರಬೀಳಲೆಂಬುದು ನಮ್ಮ ಹೃದ್ಗತ ಅಚ್ಚಳಿಯದ ಹೆಬ್ಬಯಕೆ.

ರಾಯದುರ್ಗ, —**ಸುಖಾಶ್ರಯ ಪ್ರಬೋಧಾ.**

**ಮಣಿಕಾಂತಿ—**

ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯರು ಕನ್ನಡ ನಾಡಿಗೆಲ್ಲ ಚಿರಪರಿಚಿತರು. ಪೂಜ್ಯ ಸ್ವಾಮಿಗಳವರು ಈಗಾಗಲೇ ವಿವಿಧ ಮುಖವಾಗಿ ಸರಸ್ವತಿಯ ಸಿರಿಮುಡಿಗೆ ಪುಷ್ಪಗಳನ್ನು ಏರಿಸಿದ್ದಾರೆ. ಧರ್ಮಾಧಿಕಾರಿಗಳಾಗಿದ್ದರೂ ಸಾಹಿತ್ಯ ಸೇವೆಯನ್ನು ಒಳ್ಳೆ ಆಸ್ಥೆಯಿಂದ ಮಾಡುತ್ತಿದ್ದಾರೆ. ಇದೀಗ ಸಿದ್ಧಾಂತ ಶಿಖಾಮಣಿಯೆಂಬ ಒಳ್ಳೇ ಮಹತ್ವದ ವೀರಶೈವ ಗ್ರಂಥವನ್ನು ಅಚ್ಚುಗನ್ನಡದಲ್ಲಿ ಕೊಟ್ಟಿರುವದು ತುಂಬಾ ಸಂತೋಷದ ವಿಷಯ. ಈ ಗ್ರಂಥವು ಗೀರ್ವಾಣ ಭಾಷೆಯಲ್ಲಿರುವದರಿಂದ ಅದು ಪಂಡಿತರ ಸೊತ್ತಾಗಿತ್ತು. ಜನ ಸಾಮಾನ್ಯರಿಗೆ ಉಕ್ಕಿನ ಕಡಲೆ ಕಾಳಿನಂತಿದ್ದಿತು. ಆದರೆ ಮಹಾ ಸ್ವಾಮಿಗಳವರು ಅತಿ ಶ್ರಮವಹಿಸಿ ವೀರಶೈವ ಸಾಹಿತ್ಯ ಭಾಂಡಾರಕ್ಕೆ ಅಪರಿಮಿತವಾದ ಸೇವೆಯನ್ನು ಸಲ್ಲಿಸಿದ್ದಾರೆ. ಆದಕ್ಕಾಗಿ ಕನ್ನಡಿಗರೆಲ್ಲ ಅವರಿಗೆ ಚಿರಋಣಿಗಳು.

ಶಿವಯೋಗಿ ಶಿವಾಚಾರ್ಯನು ವೀರಶೈವ ಧರ್ಮದ ಷಟ್‌ಸ್ಥಲದ ತತ್ವಗಳನ್ನು ಮೊತ್ತಮೊದಲು ಬಿತ್ತರಿಸಿದನು. ಈ ಗ್ರಂಥದಲ್ಲಿ ನಾಮ ರೂಪಾತ್ಮಕವಾದ ಜಗತ್ತು ಸತ್ಯವಾಗಿದೆಂಬುದು ಪ್ರತಿಪಾದಿಸಲ್ಪಟ್ಟಿದೆ. ಪೂಜ್ಯಪಾದರು ತಮ್ಮ ಅಪರಿಮಿತವಾದ ಭಕ್ತಿ ಅಪಾರವಾದ ಜ್ಞಾನ ಭಾಂಡಾರದಿಂದ ಈ ಕೃತಿಯನ್ನು ಕನ್ನಡಕ್ಕೆ ತರುವುದರಲ್ಲಿ ತುಂಬಾ ಯಶಸ್ವಿಗಳಾಗಿದ್ದಾರೆ.

ಈ ಗ್ರಂಥದಲ್ಲಿ ಜಗತ್ತಿನ ಜನರಿಗೆಲ್ಲ ಬೇಕಾದ ವಿಷಯಗಳ ತತ್ವಗಳಿವೆ. ದ್ವೈತ, ಅದ್ವೈತ, ಮುಂತಾದ ಸಿದ್ಧಾಂತಗಳಿವೆ. ನಿಜವಾಗಿ ಶ್ರೀಗಳವರೇ ಹೇಳಿದಂತೆ ಗೀತೆಗಿರುವ ಸ್ಥಾನ ಶಿಖಾಮಣಿಗಿದೆಯೆಂದರೆ ಅತಿಶಯೋಕ್ತಿಯಲ್ಲ.

ಶಿವಯೋಗಿ ಶಿವಾಚಾರ್ಯನ ಕೃತಿಗಳನ್ನು ಕೂಲಂಕುಷವಾಗಿ ಅಭ್ಯಸಿಸಿ ಅಂದಿನ ಕೃತಿಗಳಮೇಲೆ ಇನ್ನೂ ಸಾಕಷ್ಟು ವಿಮರ್ಶೆ ಬಾರದಿದ್ದುದು ಶೋಚನೀಯವಾದುದು. ಅವನ ವಾಣಿ ಕಾವ್ಯ ವಾಣಿ; ಹೃದಯ ಕವಿ ಹೃದಯ. ವೇದಾಗಮಗಳನ್ನು ಚನ್ನಾಗಿ ಅಭ್ಯಸಿಸಿರಲೇಬೇಕು ಅವನು

ಮಹಾ ತತ್ತ್ವಜ್ಞಾನಿ ಶಿವಯೋಗಿ. ಆತನ ಪ್ರತಿಯೊಂದು ಪದ್ಯವೂ ಮಹಾ ಕಾವ್ಯ, ಅವನ ಕಾವ್ಯದಲ್ಲಿ ಓಜಸ್ಸಿದೆ. ತೇಜಸ್ಸಿದೆ. ಓದುಗರ ಮನಸ್ಸನ್ನು ಮುಗ್ಧಗೊಳಿಸುವ ಸಾಮರ್ಥ್ಯವಿದೆ.

ಇಂಥಾ ಮಹಾ ಕವಿಯ ಕೃತಿಯೊಂದನ್ನು ಕವಿವಾಣಿಯಂತೆ ತರಲು ಪೂಜ್ಯರು ಶ್ರಮವಹಿಸಿದ್ದಾರೆ. ಅವರ ಕಾರ್ಯ ಘನವಾದದು. ತುಂಬಾ ಭಕ್ತಿಯಿಂದ ಕಾರ್ಯಪ್ರವೃತ್ತರಾಗಿದ್ದಾರೆ. ಅಲ್ಲಿ ಅವರು ಯಶಸ್ವಿಗಳೂ ಆಗಿದ್ದಾರೆ.

ವೀರಶೈವ ಧರ್ಮದ ಅನಾದಿಯಿಂದ ಬಂದುದು. ಅದರ ತತ್ವಗಳನ್ನು ಅರಿತುಕೊಳ್ಳಲಿಕ್ಕೆ ಇಂತಹ ಪುಸ್ತಕಗಳು ತುಂಬಾ ಆವಶ್ಯಕವಾದವುಗಳು. ಕನ್ನಡ ನಾಡಿನಲ್ಲಿ ಓದುಗರ ಸಂಖ್ಯೆ ಅತಿ ಕಡಿಮೆ. ಅಚ್ಚು ಹಾಕಿಸಿದ ಪುಸ್ತಕಗಳು ಮರಳಿ ಅಚ್ಚು ಮಾಡಿಸದಂತೆ ಗಟ್ಟಿಯಾಗಿ ಉಳಿದು ಬಿಡುತ್ತವೆ. ಇಂತಹ ಪ್ರಸಂಗದಲ್ಲಿ ಸಿದ್ಧರಾಗಿ ಮುಂದೆ ಬಂದು ಗ್ರಂಥವನ್ನು ಬಯಲಿಗೆ ತರಲು ಸಹಾಯಕರಾದ ತ್ಯಾಗವೀರ ಶಿವಶಂಕರಪ್ಪ ಶಿವಲಿಂಗಪ್ಪ ಚಿತ್ತರಗಿ ಬಾಗಲಕೋಟೆ, ಅವರ ಸಹಾಯ ಸ್ತುತ್ಯವಾದುದು. ಶ್ರೀಯುತರು ತಮ್ಮ ತನು ಮನ ಧನಗಳನ್ನು ಈಗಾಗಲೇ ಸಮಾಜಕ್ಕೆ ಮುಡುಪನ್ನಾಗಿರಿಸಿದ್ದಾರೆ ಅವರಿಂದ ಇನ್ನೂ ಅನೇಕ ಗ್ರಂಥಗಳು ಬೆಳಕು ಕಾಣಲೆಂದೂ ಮಹಾ ಸ್ವಾಮಿಗಳವರಿಂದ ಇನ್ನೂ ಹೆಚ್ಚು ಸಾಹಿತ್ಯ ಸೇವೆಸಲ್ಲಲೆಂದೂ ಕೋರಿಕೆ.

ಬಾಗಲಕೋಟೆ
ದಿನಾಂಕ ೩-೪-೫೨.
ಬಸವಜಯಂತಿ

**ಆರ್. ಸಿ. ಹಿರೇಮಠ,** ಎಂ.ಎ.,
ರೀಡರ, ಕರ್ನಾಟಕ ಯೂನಿವರ್ಸಿಟಿ ಆಫೀಸ, ಧಾರವಾಡ

" ಶಿದ್ಧಾಂತ ಶಿಖಾಮಣಿ " ಗೀರ್ವಾಣ ಭಾಷೆಯಲ್ಲಿರುವುದರಿಂದ ಅದನ್ನು ಅರಿತುಕೊಳ್ಳಲು ಕನ್ನಡಿಗರಿಗೆ ಸಾಧ್ಯವಾಗಿದ್ದಿಲ್ಲ. ಈ ಕೊರತೆಯನ್ನು ಶ್ರೀ ಜ. ಚ. ನಿ. ಅವರು ತುಂಬಿಕೊಟ್ಟು ಕನ್ನಡಿಗರಿಗೆ ಉಪಕಾರ ಮಾಡಿದ್ದಾರೆ. ಸಕಲರ ಹೃದಯವನ್ನು ಅರಳಿಸುತ್ತದೆ. ಈ 'ಮಣಿಕಾಂತಿ' ನಿರರ್ಗಳವಾದ ಶೈಲಿಯಲ್ಲಿ, ಗಂಭೀರವಾದ ಭಾಷೆಯಲ್ಲಿ ಸುಂದರವಾಗಿ ಬರೆ

ಯಲ್ಪಟ್ಟಿದೆ. ವೀರಶೈವ ತತ್ವಜ್ಞಾನವನ್ನು ಅರಿಯುವವರಿಗೆ, ಅಭ್ಯಸಿಸುವವರಿಗೆ ಶ್ರೀ ಜ. ಚ. ನಿ. ಅವರ "ಮಣಿಕಾಂತಿ" ಕೈಪಿಡಿಯಾಗಿದ್ದು ಕೈದೀವಟಿಕೆಯಾಗಿದೆ ಮುಮುಕ್ಷುಗಳು ಸಂಗ್ರಹಿಸಿಡಬೇಕಾದ ಹೊತ್ತಿಗೆ ಮಣಿಕಾಂತಿ.

ಹುಬ್ಬಳ್ಳಿ, —ನವಯುಗ

ಶ್ರೀ ರೇಣುಕಾಚಾರ್ಯರು ವೀರಶೈವ ಸಿದ್ಧಾಂತವನ್ನು ಶ್ರೀ ಅಗಸ್ತ್ಯ ಮಹಾಮುನಿಗಳಿಗೆ ಉಪದೇಶಮಾಡಿದ್ದನ್ನು ಶ್ರೀ ಶಿವಯೋಗಿ ಶಿವಾಚಾರ್ಯರು ಸಿದ್ಧಾಂತ ಶಿಖಾಮಣಿ ಎಂಬ ಗ್ರಂಥದಲ್ಲಿ ಸಂಸ್ಕೃತ ಶ್ಲೋಕಗಳ ರೂಪದಲ್ಲಿ ಉಲ್ಲೇಖಿಸಿದ್ದಾರೆ. ಈ ಶ್ಲೋಕಗಳಿಗೆ ಲೇಟ್ ಆಸ್ಥಾನ ವಿದ್ವಾನ್ ವೇ|| ಎಸ್.. ಆರ್. ಕರಿಬಸವಶಾಸ್ತ್ರಿಗಳು ಮತ್ತು ವೇ|| ಪಂಡಿತ ಕಾಶೀನಾಥಶಾಸ್ತ್ರಿಗಳು ಕನ್ನಡದಲ್ಲಿ ಭಾಷಾಂತರವನ್ನು ಮಾಡಿದ್ದಾರೆ. ಸಾಹಿತಿಗಳು ಮತ್ತು ಶಿವಾನುಭವಿಗಳು ಆದ ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ಸಿದ್ಧಾಂತ ಶಿಖಾಮಣಿಯ ಷಟ್ಸ್ಥಲದ ಭಾವಾರ್ಥವನ್ನು ಕಾವ್ಯಮಯ ಶೈಲಿಯಲ್ಲಿ ಪಂಡಿತ ಪಾಮರರಿಗೆ, ರಸಜ್ಞರಿಗೆ, ಜಿಜ್ಞಾಸುಗಳಿಗೆ ಮೆಚ್ಚುಗೆಯಾಗುವಂತೆ ಸುಂದರ ಕನ್ನಡ ಭಾಷೆಯಲ್ಲಿ ಬರೆದು ವೀರಶೈವಮತೀಯರಿಗೆ ಮಹತ್ತಾದ ಉಪಕಾರವನ್ನು ಮಾಡಿದ್ದಾರೆ. ಪ್ರತಿಯೊಬ್ಬ ವೀರಶೈವ ಮತೀಯನು ಸಂಗ್ರಹಿಸಲು ಯೋಗ್ಯವಾದ ಗ್ರಂಥವಾಗಿದೆ.

ಮೈಸೂರು. —ಆತ್ಮವಿಚಾರ.

## ಅಲ್ಲಯ್ಯನ ಬೆಳಕು

ಈ ಗ್ರಂಥದಲ್ಲಿ ಶ್ರೀಗಳವರು ಅಲ್ಲಮಪ್ರಭುವಿನ ವಚನಗಳನ್ನು ಸಮಯೋಚಿತವಾಗಿ ಅಳವಡಿಸಿಕೊಂಡು ಭಾವಪೂರ್ಣವಾಗಿ ಯುಕ್ತಸನ್ನಿವೇಶಗಳಲ್ಲಿ ಬಳಸಿಕೊಂಡು ವಿವಿಧ ಜೀವನ ಚರಿತ್ರೆಗಳನ್ನು ಕಲ್ಪಿಸಿರುತ್ತಾರೆ. ಇಲ್ಲಿ ಶ್ರೀ ಶ್ರೀಗಳು ಕನ್ನಡಿಗರಿಗೆ ಸಾಹಿತ್ಯದಾಸೋಹವನ್ನು ನಡೆಯಿಸಿರುತ್ತಾರೆ. ಗುರುಪೀಠದಲ್ಲಿ ಮಂಡಿಸಿರುವ ಶ್ರೀ ಶ್ರೀಗಳೊಬ್ಬರು ವೀರಶೈವ

ಪಂಥದಲ್ಲಿರುವ ಗುರುವಿರಕ್ತವರ್ಗಗಳ ಐಕ್ಯತೆಯನ್ನು ಸಾಧಿಸಲು ಇಂಥ ಕೃತಿಗಳನ್ನು ಬರೆಯುತ್ತಿರುವುದು ಸ್ತೋತ್ರಾರ್ಹ. ಪ್ರತಿಯೊಬ್ಬ ವೀರಶೈವ ಮತೀಯನಿಂದ ಪಠಿಸಲು ಯೋಗ್ಯವಾದ ಗ್ರಂಥವಾಗಿದೆ.

ಆಗಸ್ಟ್, ೧೯೫೨. —**ಆತ್ಮವಿಚಾರ.**

ವಚನಕಾರರಲ್ಲಿ ಅಲ್ಲಮ ಪ್ರಭುಗಳ ನಿಲವು ತುಂಬ ಶ್ರೇಷ್ಠವಾದುದು. ಅವರು ಶೂನ್ಯ ಸಿಂಹಾಸನಾಧೀಶ್ವರರು ; ಅನುಭವ ಮಂಟಪದ ಅಧ್ಯಕ್ಷರು ; ಅವರ ವಚನಗಳು ಬೇರೆ ಬೇರೆ ಕಡೆ ವಿವಿಧ ರೀತಿಯಲ್ಲಿ ಪ್ರಕಟವಾಗಿವೆ. ಆದರೆ '**ಅಲ್ಲಯ್ಯನ ಬೆಳಕು**' ಎಂಬ ಈ ಪುಸ್ತಕದಲ್ಲಿ ಒಂದು ವೈಶಿಷ್ಟ್ಯವಿದೆ ಅದೇನೆಂದರೆ ಅವರ ಅನೇಕ ಮುಖ್ಯವಾದ ವಚನಗಳಿಗೆ ಈ ಪುಸ್ತಕದಲ್ಲಿ ವಿವರಣೆ ಕೊಡಲಾಗಿದೆ. ಪ್ರಭುಗಳ ವಚನಗಳಲ್ಲಿ ಅನೇಕ ಮುಂಡಿಗೆಗಳುಂಟು. ಹಲವು ವಚನಗಳು ಮುಂಡಿಗೆಗಳಷ್ಟೇ ಗಡುಚಾಗಿವೆ. ಅವುಗಳನ್ನೆಲ್ಲ ಬಿಡಿಸಿ, ಮುಚ್ಚಿದ ಬೆಳಕನ್ನು ಬೆಳಗುವ ಮಿಂಚನ್ನಾಗಿ ಮಾಡಿ ನಮ್ಮ ಅಜ್ಞಾನವನ್ನು ಪರಿಹರಿಸುವ ಕಾರ್ಯವನ್ನು ಈ ಪುಸ್ತಕ ಮಾಡಿದೆ. ವಚನ ವಾಙ್ಮಯದ ಅಭ್ಯಾಸಿಗಳಿಗೆ ಇದು ಒಳ್ಳೆಯ ಕೈದೀವಿಗೆಯಂತಿದೆ.

ಆಗಸ್ಟ್, ೧೯೫೨.
ಮೈಸೂರು. —**ಪುಸ್ತಕ ಪ್ರಪಂಚ.**

## Karanika Kumara Yogi

This is an inspiring account of a great Veerasaivacharya of the present century written by his disciple who is himself a Swamiji of repute. Sadashivayya, for that was the name of the Acharya (who was also known by his popular epithet as Kumara Yogi) was born in 1867 of very poor parents, in a village of Ranibennur taluk, Dharwar district. Very early in

his childhood he had lost his father. He learnt his three R's under his grandfather in a pial school. Along with his meagre schooling, he had to go about in the village from door to door with the begging bowl for supplementing the slender resources of the family. During one such rounds, he was taunted by an elderly person. That was the turning point in Sadashivayya's sublime life. Thence on, it was a burning desire in him to acquire great knowledge and serve humanity. He came across good souls like Rachayya and Basavappaya of Samala. He studied the six monumental works of the Nijagunashivayogi. He began to realise the importance of Ishta, Prana and Bhava Lingas and would never leave for a moment the company of "Kaivalya Paddhati." Unconsciously he was becoming a Veerasaiva mystic, While he was doing work as a teacher in Lingadahalli, one day his mother came to him and prevailed upon him to get married. The arguments set forth by him for taking up the vow of celibacy are classic, Then for about a decide Kumara Yogi wanders in search of the right Guru. He spent many long years with the famous Sidharudha Swami of Hubli, but the real Guru who delivered him "the spiritual goods" was Yelandur Basavalingaswami. Thus initiated, he

does penance in "Shambhu Betta". At the end of twelve years he realises the "truth". He goes into the world with spiritual zest and zeal to serve the suffering humanity. North Karnataka was his sphere of action. With his austere example of plain living and high thinking he woke the Veerasaiva society from its deep slumber and spurred it on to action. His mystic musings, appreciation of true culture, effective mass contact, magnetic, personality, establishment of the great Sivayoga Mandir, pious life, and love of arts are some of the landmarks in his glorious career. In 1930 Kumara Yogi became united with the Lord (*Lingaikya*).

The prose style is good, Some of the incidents are moving and significant. The author has done justice to his subject.

*Hindu*
*3-8-52:*

M. M. BHAT.

**ಶಿವಪೂಜಾವಿಧಿ**

ಸಖರಾಯಪಟ್ಟಣದ ಶ್ರೀ ಹಾಲುಸ್ವಾಮಿ ಮತಾಧ್ಯಕ್ಷರಾದ ಷ॥ ಬ್ರ॥ ಶ್ರೀ ಪಟ್ಟಾಧ್ಯಕ್ಷ ಶ್ರೀ ಶ್ರೀ ಸದಾಶಿವ ಶಿವಾಚಾರ್ಯ ಮಹಾಸ್ವಾಮಿಗಳವರು ವೀರಶೈವ ಸಂಪ್ರದಾಯವನ್ನು ಶಾಸ್ತ್ರಮರ್ಯಾದೆಯನ್ನು ಚನ್ನಾಗಿ ಅರಿತು ಆಚರಿಸುತ್ತಿರುವವರಾದ್ದರಿಂದ ತಮ್ಮ ಅನುಭವ ರಸಾಯನವನ್ನು ವೀರಶೈವ ಸಾಧಕವರ್ಗಕ್ಕೆ ಉಂಟುಮಾಡಿಕೊಡುವ ಮಹೋದ್ದೇಶದಿಂದ ಈ ಶಿವಪೂಜಾವಿಧಿಯನ್ನು ರಚಿಸಿದ್ದಾರೆ.

ಆಗಸ್ಟ್, ೧೯೫೨.

—ಪುಸ್ತಕ ಪ್ರಪಂಚ.

# ಸನ್ನಿಧಿಯ ಗ್ರಂಥಭಂಡಾರದಲ್ಲಿ ದೊರೆಯುವ ಗ್ರಂಥಗಳು.

| | | ರೂ. | ಆ. | ಪೈ. |
|---|---|---|---|---|
| ೧ | ಶ್ರೀ ನಿಡುಮಾಮಿಡಿ ಸನ್ನಿಧಿಯವರು (ಗ್ರಂಥಕರ್ತರು: ಅ. ಸ. ಕೃ.) | ೨ | ೦ | ೦ |

**ಸನ್ನಿಧಿಯವರ ಗ್ರಂಥಗಳು :**

| | | | | |
|---|---|---|---|---|
| ೧ | ಮಣಿಕಾಂತಿ | ೨ | ೦ | ೦ |
| ೨ | ಅಣ್ಣನ ಬದುಕು | ೨ | ೮ | ೦ |
| ೩ | ವಚನಾಂಜಲಿ | ೧ | ೮ | ೦ |
| ೪ | ವಚನಮಂಜರಿ | ೧ | ೮ | ೦ |
| ೫ | ಕಾರಣಿಕ ಕುಮಾರ ಯೋಗಿ | ೨ | ೦ | ೦ |
| ೬ | ಹೆಮ್ಮೆಗಳು | ೦ | ೧೦ | ೦ |
| ೭ | ಸೀಳ್ನುಡಿ | ೦ | ೧೨ | ೦ |
| ೮ | ಮುಪ್ಪಿನಾರ್ಯರ ಭಾವ ಪಾತ್ರಗಳು | ೦ | ೧೦ | ೦ |
| ೯ | ಗುರುವಿನ ಗೆಲವು | ೦ | ೧೨ | ೦ |
| ೧೦ | ಆಯ್ದಕ್ಕಿ ಮಾರಯ್ಯ (ನಾಟಕ) | ೦ | ೮ | ೦ |
| ೧೧ | ಸಮ್ಯಜ್ಞಾನಿ ಚನ್ನಬಸವಣ್ಣ | ೦ | ೧೨ | ೦ |
| ೧೨ | ಹೊನ್ನ ಹಕ್ಕಿ | ೧ | ೪ | ೦ |
| ೧೩ | ಅಕ್ಕನ ಲಾವಣಿ | ೦ | ೨ | ೦ |
| ೧೪ | ಕರಿಬಸವೇಂದ್ರರ ಒಸಗೆ | ೦ | ೧ | ೬ |
| ೧೫ | ಯೋಗಾಂಗತ್ರಿವಿಧಿ | ೦ | ೨ | ೦ |
| ೧೬ | ಶ್ರೀಶೈಲ ಪಂಡಿತಾರಾಧ್ಯ ಮೂಲಪೀಠಮು (ತೆಲುಗು) | ೦ | ೮ | ೦ |
| ೧೭ | ನಾನು–ನೀನು | ೦ | ೪ | ೦ |
| ೧ | ಶ್ರೀ ನಿಡುಮಾಮಿಡಿ ಸ್ವಾಮಿಗಳ ಸಂಕ್ಷಿಪ್ತ ಚರಿತ್ರೆ (ಲೇಖಕರು: ಹಂಪಯ್ಯ, ಶಿದ್ಲಘಟ್ಟ.) | ೦ | ೪ | ೦ |

ವಿಳಾಸ :

**ಜ. ನಿ. ಪುಸ್ತಕ ಭಂಡಾರ,**

ನಂ. ೪೯, ಹೆಚ್. ಬಿ. ಸಮಾಜ ರೋಡು, ಬೆಂಗಳೂರು ೪.